೨೯೩

## ಪ್ರಚಾರ ಪುಸ್ತಕ ಮಾಲೆ

# ಇಮ್ಮಡಿ ನಾಗವರ್ಮ

ಸೀತಾರಾಮ ಜಾಗೀರ್‌ದಾರ್

ಪ್ರಚಾರ ಪುಸ್ತಕ ಮಾಲೆ-೨೯೩

# ಇಮ್ಮಡಿ ನಾಗವರ್ಮ

ಸೀತಾರಾಮ ಜಾಗೀರ್‌ದಾರ್




೨೦೦೭

# ಮುನ್ನುಡಿ

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಸೆನೆಟ್ ಸಭೆಯಲ್ಲಿ ಹೇಳಿದ ಮಾತುಗಳನ್ನು ಈಗ ನೆನಪಿಸಿಕೊಳ್ಳಬಹುದು. "ಕಾರಣಾಂತರಗಳಿಂದ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಲು ಅಶಕ್ತರಾದ ಜನಸಾಮಾನ್ಯರಿಗೆ ವಿಶ್ವವಿದ್ಯೆಯ ಪರಿಚಯ ಮಾಡಿಕೊಡಲು ನಮ್ಮ ವಿಶ್ವವಿದ್ಯಾನಿಲಯ ಶ್ರಮಿಸಬೇಕು. ಈ ಕಾರ್ಯವು ಪ್ರಚಾರೋಪನ್ಯಾಸ ಮತ್ತು ಪ್ರಕಟಣೆಗಳ ಮೂಲಕ ನಡೆಯಬೇಕಾಗಿದೆ. ಅತ್ಯಂತ ಪ್ರಯೋಜನಕಾರಿಯಾದ ಈ ಮಹತ್ಕಾರ್ಯವನ್ನು ವಿಶ್ವವಿದ್ಯಾನಿಲಯವು ಬೇಗನೆ ಕಾರ್ಯರೂಪಕ್ಕೆ ತರುವುದೆಂದು ನಂಬಿದ್ದೇನೆ."

೧೯೩೩ರಲ್ಲಿ ಸ್ಥಾಪನೆಯಾದ ಅಧ್ಯಾಪಕರ ಸಂಘ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಪ್ರಾರಂಭಿಸಿತು. ಈ ಪ್ರಯೋಗದ ಖ್ಯಾತಿ ವಿದೇಶಗಳಿಗೂ ಹಬ್ಬಿತು. "ನಹಿ ಜ್ಞಾನೇನ ಸದೃಶಂ" ಎಂಬ ಮೈಸೂರು ವಿಶ್ವವಿದ್ಯಾನಿಲಯದ ಆದರ್ಶದ ಕಾರ್ಯಾಚರಣೆಗಳಲ್ಲಿ ಪ್ರಚಾರೋಪನ್ಯಾಸ ಮಾಲೆಯೂ ಒಂದು. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ತಿಳಿವಳಿಕೆ ಪಡೆಯಲು ಅನುವಾಗುವಂತೆ ಪ್ರಚಾರ ಪುಸ್ತಕಮಾಲೆ ಅಸ್ತಿತ್ವಕ್ಕೆ ಬಂದು, ಅದು ಅತ್ಯಂತ ಜನಪ್ರಿಯವಾಗಿದೆ.

ಸುವರ್ಣ ಪ್ರಚಾರ ಪುಸ್ತಕಮಾಲೆಯಡಿಯಲ್ಲಿ ಒಂದು ದಶಕದ ನಂತರ ಈಗ ಹೊಸದಾಗಿ ೫೦ ಶೀರ್ಷಿಕೆಗಳು ಪ್ರಕಟವಾಗುತ್ತಿವೆ. ಇವುಗಳಲ್ಲಿ ಸಾಹಿತ್ಯ, ಅರ್ಥಶಾಸ್ತ್ರ, ವೈದ್ಯ ವಿಜ್ಞಾನ, ಪ್ರಾಣಿ ವಿಜ್ಞಾನ ಮುಂತಾದ ವಿಷಯಗಳನ್ನು ಕುರಿತಂತೆ ಅತ್ಯಂತ ಉಪಯುಕ್ತ ಪುಸ್ತಿಕೆಗಳು ಸೇರಿದ್ದು, ಇವು ಕೂಡ ಎಲ್ಲ ಪುಸ್ತಕ ಪ್ರೇಮಿಗಳ ಮತ್ತು ಜ್ಞಾನಾಸಕ್ತರ ಮೆಚ್ಚುಗೆ ಪಡೆಯುತ್ತವೆಂದು ಆಶಿಸುತ್ತೇನೆ.

ಜೆ. ಶಶಿಧರ ಪ್ರಸಾದ್
ಕುಲಪತಿ

## ಪ್ರಕಾಶಕರ ಮಾತು

೧೯೩೩ರಲ್ಲಿ ಸ್ಥಾಪನೆಯಾದ ಪ್ರಸಾರಾಂಗ ಜ್ಞಾನಪ್ರಸಾರದ ಕಾರ್ಯದಲ್ಲಿ ನೀಡಿದ ಕೊಡುಗೆ ಮಹತ್ತ್ವದ್ದು. ಜನಸಾಮಾನ್ಯರಿಗೆ ವಿಶ್ವವಿದ್ಯೆಯ ಪರಿಚಯ ಆಗಬೇಕೆಂಬ ಆಶಯವನ್ನು ಗಮನದಲ್ಲಿಟ್ಟುಕೊಂಡು ಮೈಸೂರು ವಿಶ್ವವಿದ್ಯಾನಿಲಯದ ಈ ಸಂಸ್ಥೆ ಕೆಲಸ ಮಾಡುತ್ತಿದೆ. ೧೯೩೩ರಲ್ಲೇ ಅಧ್ಯಾಪಕರ ಸಂಘ ಪ್ರಾರಂಭಿಸಿದ ಪ್ರಚಾರೋಪನ್ಯಾಸ ಕಾರ್ಯಕ್ರಮ ಉತ್ತಮ ಪ್ರಯೋಗವೆಂಬ ಖ್ಯಾತಿಯನ್ನು ಗಳಿಸಿದೆ. ಪ್ರಚಾರ ಪುಸ್ತಕಮಾಲೆಯಲ್ಲಿ ಪ್ರಕಟವಾಗಿರುವ ನೂರಾರು ಪುಸ್ತಕಗಳಿಂದ ಸಾಮಾನ್ಯ ಜನರಿಗೂ ಜ್ಞಾನದ ವಿವಿಧ ಶಾಖೆಗಳ ಪರಿಚಯವಾದಂತಾಯಿತು. ರಾಷ್ಟ್ರಕವಿ ಕುವೆಂಪು ಅವರು ಹೇಳಿದಂತೆ "ಈ ಮೂಲಕ ವಿಶ್ವವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆ ಮೂಲೆಗೆಲ್ಲ ಹರಿದು, ಸಮಷ್ಟಿ ಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ".

ಕಿರು ಹೊತ್ತಿಗೆಗಳ ಮೂಲಕ ಒಂದು ವಿಷಯವನ್ನು ಹಿತಮಿತವಾಗಿ ಪರಿಚಯಿಸುವ ಕೆಲಸವನ್ನು ಅನೇಕರು ಕೈಗೊಂಡಿದ್ದಾರೆ. ಆದರೆ, ಪ್ರಸಾರಾಂಗದ ಪ್ರಚಾರ ಪುಸ್ತಕ ಮಾಲೆ ಅನೇಕ ದಶಕಗಳಿಂದ ಇದನ್ನು ನಿರ್ವಹಿಸಿದ ರೀತಿ ಪ್ರಶಂಸಾರ್ಹವಾದುದು. ಈ ಕಾರ್ಯಕ್ರಮದಲ್ಲಿ ನಾಡಿನ ಅತ್ಯಂತ ಶ್ರೇಷ್ಠ

ಸಾಹಿತಿಗಳು, ಚಿಂತಕರು, ವಿಜ್ಞಾನಿಗಳು ಪಾಲುದಾರರಾಗಿದ್ದರು. ಇದರ ವೈಶಿಷ್ಟ್ಯವನ್ನು ಮನಗಂಡ ಕುಲಪತಿಗಳು ಹಲವರು ಪ್ರಚಾರ ಪುಸ್ತಕ ಮಾಲೆ ಮುಂದುವರಿಯಲು ಕಾರಣಕರ್ತ ರಾಗಿದ್ದಾರೆ. ಈಗ ೫೦ ಉಪನ್ಯಾಸಗಳನ್ನು ಏರ್ಪಡಿಸಿ, ಈ ಸುವರ್ಣ ಪ್ರಚಾರ ಪುಸ್ತಕಮಾಲೆಯನ್ನು ಹೊರತರಲು ನೆರವಾಗಿ ಮಾನ್ಯ ಕುಲಪತಿಗಳಾದ ಡಾ. ಶಶಿಧರ ಪ್ರಸಾದ್ ಅವರು ನಮ್ಮ ಕೃತಜ್ಞತೆಗೆ ಅರ್ಹರಾಗಿದ್ದಾರೆ. ಈ ಕಾರ್ಯಕ್ರಮದಲ್ಲಿ ನೆರವಾದ ಎಲ್ಲರಿಗೂ ನಮ್ಮ ಧನ್ಯವಾದಗಳು. ಈ ಪುಸ್ತಿಕೆಯನ್ನು ಬರೆದುಕೊಟ್ಟ ಸೀತಾರಾಮ ಜಾಗೀರ್‌ದಾರ್ ಅವರಿಗೆ ಕೃತಜ್ಞನಾಗಿದ್ದೇನೆ.

**ಆರ್ವಿಯಸ್ ಸುಂದರಂ**
ನಿರ್ದೇಶಕ, ಪ್ರಸಾರಾಂಗ

## ಪೀಠಿಕೆ

ಕನ್ನಡ ಭಾಷೆಗೆ ಬೇಕಾಗುವ ಭಾಷಾ ಸಂಬಂಧದ ಎಲ್ಲಾ ಶಾಸ್ತ್ರಗಳನ್ನು - ವ್ಯಾಕರಣ, ಅಲಂಕಾರ, ಅಭಿಧಾನವಸ್ತುಕೋಶ ಹಾಗೂ ಛಂದೋವಿಚಿತಿ ಗ್ರಂಥಗಳನ್ನು - ಬರೆದು ಅದಕ್ಕೆ ಶಾಸ್ತ್ರ ಸ್ವರೂಪವನ್ನು ಒದಗಿಸಿದ ಏಕೈಕ ಮೊದಲ ವ್ಯಕ್ತಿ ಇಮ್ಮಡಿ ನಾಗವರ್ಮ.

*ಛಂದೋವಿಚಿತಿಯಲಂಕೃತಿ*

*ಸಂದಭಿಧಾ [ವಸ್ತು] ಕೋಶಮೆಂಬಿವು ವಾಕ್‌ಶ್ರೀ।*

*ಸುಂದರಿಗೆ ರತ್ನ ಮಂಡನ*

*ದಂದದೊಳಿರ್ದ್ದಪುವು ನಾಗವರ್ಮನ ಕೃತಿಗಳ್॥*[1]

ಇತ್ತೀಚೆಗೆ ಈ ಶಾಸ್ತ್ರಕಾರನ ಕಾವ್ಯ "ವರ್ದ್ಧಮಾನಪುರಾಣಂ" ದೊರಕಿದ್ದು ಆತನು ಉತ್ತಮ ಕವಿಯೂ ಆಗಿದ್ದನೆಂದು ಸಾರುತ್ತದೆ.[2] ಈ ಕಾವ್ಯದ ಕೊನೆಯಲ್ಲಿ ಇದನ್ನು ಸಮಾಪ್ತಿಗೊಳಿಸಿದ ತೇದಿಯ ವಿವರಗಳನ್ನು ಕೊಟ್ಟಿದೆ.

*ವಸುವರ್ಗ್ಗಾಂಕಮಿದ [ಂತತೀತ ಶ] ಕ ಭೂಭೃದ್ವತ್ಸರಂ ಚಿತ್ರಭಾ*

*ನು ಸಮಾಖ್ಯಾಬ್ದ ಕಮಾಶ್ವಯುಗ್ಬಹುಳ ಷಷ್ಠೀ ವಾಸರಂ ತಾ ಪುನ*

*ರ್ವ್ವಸುರುಕ್ಷಂ ಸುರಮಂತ್ರಿವಾರಮಭಿಜಿಲ್ಲಗ್ನೋದಯಂ ಕೂಡೆವ*

*ರ್ತ್ತಿಸೆ [ಪೇಳ್ದಂ] ಕವಿತಾಗುಣೋದಯನಿದಂ ಚೆಲ್ವಾಗೆ ತಾತ್ಪರ್ಯ್ಯದಿಂ॥*

- ಆ. ೧೬-೪೭

---

1. ಕಾವ್ಯಾವಲೋಕನಂ (ಮೈ.ವಿ.ವಿ. ಪ್ರಕಟಣೆ, ತೃತೀಯ ಮುದ್ರಣ) (೧೯೬೭) ಪದ್ಯ : ೬೪೫, ಪು. ೨೧೨.

2. (a) ಶ್ರೀ ಬಿ.ಎಸ್. ಸಣ್ಣಯ್ಯನವರು ಇದನ್ನು ಸಂಪಾದಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ಕ್ರಿ.ಶ. 1974ರಲ್ಲಿ ಇದನ್ನು ಪ್ರಕಟಿಸಿದೆ.

   (b) ಅಭಿಧಾನವಸ್ತುಕೋಶಂ (ಮದ್ರಾಸ್ ವಿ.ವಿ. AV & HS), ಸ್ವರ್ಗ, ಪದ್ಯ - 39, ಪು. 7.

ವಸು ಎಂದರೆ ಅಗ್ನಿ2(b) = 3, ವರ್ಗ = 6 ಮತ್ತು ಅಂಕ = 9, "ಅಂಕಾನಾಂ ವಾಮತೋಗತಿಃ" ಎಂಬ ಶಾಸ್ತ್ರೋಕ್ತಿಯಂತೆ 963 ಎಂದಾಗುತ್ತದೆ. ಇಲ್ಲಿನ ವಿವರಗಳು ಹೀಗಿದೆ : ಶಾ.ಶ. 963, ಚಿತ್ರಭಾನು ಸಂವತ್ಸರ, ಆಶ್ವಯುಜ ಮಾಸ ಬಹುಳ ಷಷ್ಠೀ ತಿಥಿ, ಪುನರ್ವಸು ನಕ್ಷತ್ರ, ಬೃಹಸ್ಪತಿವಾರ, ಅಭಿಜಿಲ್ಲಗ್ನ ಮುಹೂರ್ತದಲ್ಲಿ ಕವಿತಾಗುಣೋದಯನಿಂದ ಕಾವ್ಯವು ಬರೆಯಲ್ಪಟ್ಟಿತು. 'ಕವಿತಾಗುಣೋದಯವೆಂಬುದು ನಾಗವರ್ಮನ ಕಾವ್ಯಕ್ಕೆ ಸಂದ ಬಿರುದು ಅಥವಾ ಅವನ ಪಾಂಡಿತ್ಯ ಹಾಗೂ ಪ್ರತಿಭೆಗಳಿಗೆ ನೀಡಿದ ಗೌರವ. ಈ ವಿವರಗಳು ಕ್ರಿ.ಶ. 1042 ಅಕ್ಟೋಬರ್ 07ಕ್ಕೆ ಸರಿಹೊಂದುತ್ತವೆ. (07-10-1042 A.D.)

ಮೇಲ್ಕಾಣಿಸಿದ ಪದ್ಯವನ್ನು ವಿದ್ವಾಂಸರು ಹಲವಾರು ರೀತಿಯಿಂದ ವಿವರಿಸಿದ್ದಾರೆ. ಅದನ್ನು ಬೇರೆಡೆ ಒಂದು ಸಂಪ್ರಬಂಧದಲ್ಲಿ ನಾನು ಕೂಲಂಕಷವಾಗಿ ಚರ್ಚಿಸಿ ಸೂಕ್ತವಾದ ಸರಳ ರೀತಿಯಲ್ಲಿ ಈ ನಿರ್ಣಯಕ್ಕೆ ಬಂದಿದ್ದೇನೆ. 'ವಸು' ಎಂದರೆ 8 (ಎಂಟು) ಮತ್ತು 'ವರ್ಗ' ಎಂದರೆ 3 (ಮೂರು) ಹಾಗೂ ವರ್ಗ = 4 (ನಾಲ್ಕು) ಎಂಬ ಸಂಖ್ಯಾಸೂಚಕ ಅರ್ಥಗಳೂ ಇವೆ. ಆದರೆ ಅವು ಜಯಸಿಂಹ ಜಗದೇಕಮಲ್ಲ (I) ಹಾಗೂ ವಾದಿರಾಜ ಯತಿಗಳ (ಕ್ರಿ.ಶ. 1025) ಕಾಲಕ್ಕೆ ಹೊಂದುವುದಿಲ್ಲ[3]. ಈ ವಾದಿರಾಜರು ಪ್ರಸ್ತುತ ಇಮ್ಮಡಿ ನಾಗವರ್ಮನ ಕಾವ್ಯವನ್ನು ಶೋಧಿಸಿಕೊಟ್ಟವರೆಂದು ಆತ ತಿಳಿಸಿದ್ದಾನೆ.

---

*3. ಯಶೋಧರ ಚರಿತೆಯನ್ನು ಸಂಸ್ಕೃತದಲ್ಲಿ ಬರೆದ ವಾದಿರಾಜ ಜೈನ ಯತಿಗಳು ಪಾರ್ಶ್ವನಾಥ ಚರಿತೆಯನ್ನು ಕ್ರಿ.ಶ. 1025 ರಲ್ಲಿ ಬರೆದು ಮುಗಿಸಿದರು ನೋಡಿ.* Vādirāja's Yasōdhara Charita *(Ed. Dr. K. Krishnamoorthy) pp. ix & p. 26 Intro.*

*ಕಥೆಗೆಣಭೃತ್ಪ್ರಣೇತಮಿತಿಹಾಸ ಸಮುದ್ಭವಮಾನತೇಂದ್ರನೀ*
*ಕೃತಿಗಧಿನಾಯಕಂ ನೆಗಟ್ದಿ ವೀರಜಿನಂ ಮನಮೊಲ್ದು ಪೇ(ಟ್ದಿ)ನ*
*ನ್ನಿತಮತಿ ನಾಗವರ್ಮ್ಮ ಕವಿ ಶೋಧಿಸಿದರ್ ಸಲೆವಾದಿರಾಜಪಂ*
*ಡಿತರೆನೆ ಮೆಚ್ಚದಿಪ್ಪ ಖಳನುಂ ದೊರೆಕೊಳ್ಗುಮೆ ಕೇಳ್ದೊಡಿಂತಿದಂ||*[4]

ವಾದಿರಾಜರು ತಿದ್ದಿ ತೀಡಿ ಕಾವ್ಯವನ್ನು ಪರಿಶುದ್ಧಗೊಳಿಸಿದರು. ಅವರನ್ನು ಕಾವ್ಯಾವಲೋಕನಂ ಗ್ರಂಥದಲ್ಲಿ ವಿದ್ವಾಂಸ ಶಬ್ದಕ್ಕೆ ಉದಾಹರಣೆ ನೀಡಿದ್ದಾನೆ.

*ಅದ್ವೈತವಾದಿನಿವಹ ಮ*
*ದದ್ವಿರದ ಘಟಾವಿಪಾಟನೈಕ ಪಟಿಷ್ಠ*
*ಸ್ಯಾದ್ವಾದಾಚಲ ಸಿಂಹಂ*
*ವಿದ್ವಾಂಸರ್ಪೊಗಟೆ ವಾದಿರಾಜಂ ನೆಗಟ್ದಂ||*[5]

ವಿದ್ವಾಂಸರು ಸ್ವತಃ ವಾದಿರಾಜರನ್ನು 'ಸ್ಯಾದ್ವಾದಾಚಲ ಸಿಂಹಂ' ಎಂದು ಮುಂತಾಗಿ ಹೊಗಳಿದ್ದಾರೆ. ಈ ಖಚಿತ ಸಾಮಗ್ರಿಯನ್ನು ಮುಂದಿಟ್ಟುಕೊಂಡು ಇಮ್ಮಡಿ ನಾಗವರ್ಮ ಕವಿ ಕ್ರಿ.ಶ. 1042ರಲ್ಲಿ ಇದ್ದನೆಂದು ಹೇಳಬಹುದು ಮತ್ತು ಕ್ರಿ.ಶ. 1145ರಲ್ಲಿ ಇದ್ದನೆಂದು ನಿರಾಧಾರ ಊಹೆಗಳನ್ನು ಕೈಬಿಡಬಹುದು.

ಈ ಇಮ್ಮಡಿ ನಾಗವರ್ಮನು ಬರೆದ ಸದ್ಯ ಉಪಲಬ್ಧವಾಗಿರುವ ಕೃತಿಗಳು :

---

4. *ವರ್ಧಮಾನಪುರಾಣಂ, ಆ. ೧ - ೨೧, ಪು. ೭.*
5. *ಕಾವ್ಯಾವಲೋಕನಂ, ಪದ್ಯ. ೧೮೮, ಪು. ೬೨.*

೧. ಛಂದೋವಿಚಿತಿ - ದೊರಕಿಲ್ಲ[6]

೨. ಅಭಿಧಾನವಸ್ತುಕೋಶಂ

೩. ಕಾವ್ಯಾವಲೋಕನಂ

೪. ವರ್ದ್ಧಮಾನಪುರಾಣಂ

ಈ ಎಲ್ಲ ಸಾಮಗ್ರಿಯಿಂದ ಕವಿಯ ಇತಿವೃತ್ತವನ್ನು ಕಟ್ಟಿಕೊಳ್ಳಬೇಕಾಗುತ್ತದೆ.

---

*6. 'ಛಂದೋವಿಚಿತಿ' ಹಾಗೂ 'ಛಂದೋಂಬುಧಿ' ಗ್ರಂಥಗಳು ಮುಂದಿನ ಪ್ರತಿಕಾರರಿಂದ ಬೇರ್ಪಡಿಸಲು ಬಾರದ ರೀತಿಯಲ್ಲಿ ಕೂಡಿಸಲ್ಪಟ್ಟಿವೆಯೆಂದು ಕೆಲ ವಿದ್ವಾಂಸರ ಅಭಿಪ್ರಾಯ. ಛಂದೋಂಬುಧಿಯ ಪುಷ್ಪಿಕಾಗದ್ಯಗಳನ್ನು ವಿವಿಧ ಹಸ್ತಪ್ರತಿಗಳಲ್ಲಿ ನೋಡಿದಾಗ ಇದು ಸ್ಪಷ್ಟವಾಗುತ್ತದೆ.*

*i) ಇದು ಸಕಲ ಸುರಾಸುರೇಂದ್ರ ಮಣಿಮಕುಟ ಘಟಿತ ಶ್ರೀಮತ್ಪರಮೇಶ್ವರ ಚಾರು ಚರಣಾರವಿಂದ . . . . ಇತ್ಯಾದಿ*

*ii) ಇದು ಸಕಲ ಸುರಾಸುರೇಂದ್ರ ಮಣಿಮಕುಟ ಘಟಿತ ಶ್ರೀಭಗವದ್ಭವಾನೀವಲ್ಲಭ ಪಾದಾರವಿಂದ ದ್ವಂದ್ವ ಮಕರಂದ ಮತ್ತ ಮಧುಕರಾಯಮಾಣ . . . . ಇತ್ಯಾದಿ*

*iii) ಇದು ಸಮಸ್ತ ಸುರಾಸುರೇಂದ್ರ, ಮುನೀಂದ್ರ ಮಣಿ ಮಕುಟ ಘಟಿತ ಶ್ರೀಮದ್ಭಗವದರ್ಹತ್ಪರಮೇಶ್ವರ ಪಾದಾರವಿಂದ ದ್ವಂದ್ವ . . . . ಇತ್ಯಾದಿ*

*ಒಂದು ಮಾತು ಸತ್ಯ 'ಛಂದೋವಿಚಿತಿ' ಗ್ರಂಥ ಸದ್ಯ ಉಪಲಬ್ಧವಾಗಿಲ್ಲ.*

*ನಾಗವರ್ಮರು ಬಹಳ ಜನರಾಗಿ ಹೋಗಿದ್ದಾರೆ - ಉದಾ.*

*a) ಕಾದಂಬರೀ 'ಛಂದೋಂಬುಧಿ' ಗ್ರಂಥಗಳ ನಾಗವರ್ಮ.*

*b) ಕರ್ಣಾಟಕ ಭಾಷಾಭೂಷಣ ಹಾಗೂ ಅಭಿಧಾನರತ್ನಮಾಲಾ ಗ್ರಂಥಕ್ಕೆ ಕನ್ನಡ ಟೀಕೆಯನ್ನು ಬರೆದ ನಾಗವರ್ಮರು. ಒಂದೊಮ್ಮೆ ಎಲ್ಲ ನಾಗವರ್ಮರನ್ನು ಒಬ್ಬನೇ ವ್ಯಕ್ತಿಯ ಹೆಸರಿನ ಕೆಳಗೂ ನೋಡುತ್ತಿದ್ದರು! ಈಗ ಇವರು ಬೇರೆ ಬೇರೆ.*

# ಕವಿಯ ಇತಿವೃತ್ತ

ಈ ನಾಗವರ್ಮ ತನ್ನ ಬಗ್ಗೆ ಸಾಕಷ್ಟು ವಿವರಗಳನ್ನು ಕೊಟ್ಟಿದ್ದಾನೆ ಮತ್ತು ನಾವೂ ಕೂಡ ಒಂದಷ್ಟು ಸಂಗತಿಗಳನ್ನು ಸೇರಿಸಬಹುದಾಗಿದೆ - ಬಾಹ್ಯ ಪ್ರಮಾಣಗಳಿಂದ.

ವರ್ದ್ಧಮಾನಪುರಾಣ ಕಾವ್ಯದಲ್ಲಿ ಕೆಳಗಿನ ಸಂಗತಿಗಳನ್ನು ಕೊಟ್ಟಿದ್ದಾನೆ (ಆಶ್ವಾಸ - ೧)

*ಕಂ || ಕವಿತಾಗುಣೋದಯಂ ವಾ*
*ಕ್ಯವಿನೋದಂ ಬುಧಸರೋಜಿನೀವನಹಂಸಂ*
*ಕವಿಕರ್ಣಪೂರನೆಂ ನಾ*
*ಗವರ್ಮ್ಮನುರ್ವ್ವೀವಿಭಾಗದೊಳ್ ಸಲೆನೆಗಳ್ದಂ ||೨೨||*

*ಮ || ಜನಕಂ ವಿಪ್ರಕುಳಪ್ರದೀಪನನಘಂ ದಾಮೋದರಂ ಪೆತ್ತ ತಾಯ್*
*ವಿನಯಾಳಂಕೃತೆ ವೀರಕಬ್ಬೆ ವರಣಂ ಶ್ರೀವೀರಭಟ್ಟಾರಕಂ*
*ತನಯಂ ಸದ್ಗುಣಮಂಡನಂ ಮಧುವಲಂ ತಾನೆಂದೊಡಾದೊಂದುಸ್ಸೆ*
*ಪಿನ ಮಾನೋನ್ನತಿಗಿಂತುನೋಂತ ನರನಾರೀ ನಾಗವರ್ಮ್ಮಂಬರಂ ||೨೩||*

* * * *

*ಉ || ಸಾರವಿಚಾರ ಚಂಚುರಮತಿಪ್ರಸರಂ ಪರಿಪಕ್ವ ಶಾಸ್ತ್ರ ಸಂ*
*ಸ್ಕಾರನುಪೇತ ಕೌತುಕಕರಂ ವಿದಿತಾಗಮಲೋಕ ವೃತ್ತನು*
*ತ್ಸಾರಿತಮತ್ಸರಂ ಸಹಜವತ್ಸಳನೆಲ್ಲಿಯುಮೀತನೆಂದು ಕೆ*
*ಯ್ವಾರದೆ ಬಣ್ಣಿಕುಂ ವಸುಮತೀವಳಯಂ ಕವಿಕರ್ಣ್ನಪೂರನಂ[7] ||೨೪||*

---

*7. ಈ ಪದ್ಯವು 'ಕಾವ್ಯಾವಲೋಕನಂ' ಗ್ರಂಥದಲ್ಲಿ ೬೮೬ನೆಯ ಪದ್ಯವಾಗಿ ಬಂದಿದೆ ಮತ್ತೆ 'ಅಭಿಧಾನವಸ್ತುಕೋಶಂ' ಗ್ರಂಥದಲ್ಲಿಯೂ ಬಂದಿದೆ. ಸಾಮಾನ್ಯಕಾಂಡ, ಪು. 117, ಪದ್ಯ - 36. ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಪಾಠಭೇದಗಳಿವೆ. ಮೂರು ಗ್ರಂಥಗಳಲ್ಲಿ ಬಂದಿರುವುದು ಗಮನಾರ್ಹ.*

*          *          *          *          *

*ಉ|| ಕನ್ನಡದೊಳ್ ನೆಗಟ್ತೆಯಸಗಂ ಗಜಗಂ ಗುಣನಂದಿ ಪೊನ್ನನೆಂ*
*ಬನ್ನನೆ ಸಂಸ್ಕೃತೋಕ್ತಿಗೆ ಮಯೂರನ ಬಾಣನ ಕಾಳಿದಾಸನೋ*
*ರನ್ನನೆ ಬೇಱೆಮತ್ತಿ ನೞಿಗಬ್ಬಿಗರೋಳಿಗರೊಳ್ ಪೊಣರ್ಚ್ಚೆಪೇ*
*ಳ್ದಿನ್ನನೆ ಬಲ್ಮೆ ವೆತ್ತ ಕವಿತಾದ್ವಯದೊಳ್ ಕವಿತಾಗುಣೋದಯಂ ||೨೭||*

*ಕವಿತಾಗುಣಕಾಂಚನನೀ*
*ಕವಿ ಮಿಕ್ಕಗ್ರಾವನಧಿಗತಾಮಳಭಾವಂ*
*ಪ್ರವರ ಗುಣರತ್ನವಾರಿಧಿ*
*ವಿವೇಕನಿಧಿ ನಾಗವರ್ಮ್ಮನಪಗತ ಶರ್ಮ್ಮಂ ||೨೮||*

ಇದೇ ಪದ್ಯ ಆ. 16 - 42ನೇ ಪದ್ಯವಾಗಿ ಕಿಂಚಿತ್ ಪಾಠಭೇದಗಳೊಂದಿಗೆ ಪುನರಾವರ್ತನಗೊಂಡಿದೆ. ಇದಲ್ಲದೆ ಈ ಕೊನೆಯ ಭಾಗದಲ್ಲಿ ಮೂರು ಪದ್ಯಗಳು ಬಹಳ ಮಹತ್ವದ್ದಾಗಿವೆ (ಆ. 16 - 39ರಿಂದ 41):

*ಮ|| ಸ|| . . . . . ಪರಮಧರಣೀ [ದೇವಾನ್ವಾಯಭೃದ್ವಾ*
*ಪ್ಪ] ಚಶಾಖಂ ಜೈನ [ಮುಖ್ಯಂ] ಶಶಿವಿಶದಯಶೋವ್ಯಾಪ್ತಧಾತ್ರೀದಿಶಾಖಂ*
*ಸು[ಚರಿತ್ರಂವ]ತ್ಸಗೋತ್ರಂ [ಮ] ಹಮಹಿಮಗುಣೋದ್ದಾಮ ದಾಮಾಗ್ರಪುತ್ರಂ*
*ಪ್ರಚುರೋದ್ಯತ್ಸೂಕ್ತಿ ಧರ್ಮ್ಮಪ್ರತಿಹತ ಖಿಳದುಃ ಕರ್ಮ್ಮನೀ[ನಾಗವರ್ಮ್ಮಂ] ||೩೯||*

*ಕಂ|| ವಿಕ್ರಮಸಂವತ್ಸರಚ[ಯಂ]*
*ವಿಕ್ರಮ ನಯವಿನಯಶಾಳಿಪಟ್ಟಿ [. . .] ಯಾ*
*ವಿಕ್ರಮರಮಳಿನ ಪರಮಪ*
*ವಿ [ಕ್ರ] ಮ ಯುಗಳಾಬ್ಜ ಮಧುಕರಂ ನಾಗಾರ್ಯ್ಯಂ ||೪೦||*

ಮ || ಶ್ರುತದೇವೀ ಮಕರಂದ ಕಲ್ಪಲಪನಂ ವಾಕ್‌ಶ್ರೀನಿವಾಸಾಂಬುಜಾ
ಯಿತವಕ್ತ್ರಂ ರಸಭಾವ ಭಾಸುರಸಮುದ್ಯದ್ಭಾರತೀ ನರ್ತನೋ
ಚಿತರಂಗಂ ಪ್ರತಿಮಾನನಂ ಪ್ರವಿಳಸದ್ವಾಕ್ಸೌಂದರೀ ಕಂದುಕಾ
ಯತಕೇಳೀಭವನಾಜಿರೋಪಮುಖಂ ಭೂಭಾಗದೊಳ್ ನಾಕಿಗಂ[10] ||೪೧||

ಕಾವ್ಯಾವಲೋಕನ ಗ್ರಂಥದ ಮುಕ್ತಾಯದ ಭಾಗದಲ್ಲಿ ಕೂಡ ತನ್ನ ಬಗೆಗೆ ಹೀಗೆ ಹೇಳಿದ್ದಾನೆ,

ಕಂ || ವಾಮನನುಂ ರುದ್ರಟನುಂ
ಭಾಮಹನುಂ ದಂಡಿಯುಂ ಮನಂಗೊಳೆಪೇಳ್ದಂ
ತೀಮಹಿಗೆ ನೆಗಟೆಪೇಳ್ದಂ
ದಾಮೋದರತನಯನೀ ವಚೋಲಂಕೃತಿಯಂ ||೬೧||

ಚಂ ||ಸಕಲಕಲಾವಿದಂ ಮದವಿದೂರನುದಾರನಮತ್ಸರಂ ಗುಣಾ
ಧಿಕನಭಿಮಾ[1]ನ[1] ತುಂಗನವದಾತಯಶಂ ವಿಬುಧೈಕವತ್ಸಲಂ
ಸುಕವಿ ಸರಸ್ವತೀವದನ ಮಂಗಳದರ್ಪ್ಪಣನೆಂದು[2] ಕೂರ್ತ್ತು[2] ಕೀ
ರ್ತ್ತಿಕುಮನುರಾಗದಿಂ ವಸುಮತೀವಳಯಂ ಕವಿನಾಗವರ್ಮ್ಮನಂ[11] ೬೬೨

---

10. ಇದೇ ಪದ್ಯ ಕಾವ್ಯಾವಲೋಕನದಲ್ಲಿ 'ಗುಣವಿವೇಕ ಎಂಬ ತೃತೀಯಾಧಿಕರಣದ ಮುಕ್ತಾಯದ ಪದ್ಯವಾಗಿ( ಪದ್ಯ - 779) ಬಂದಿದೆ. ಮತ್ತೆ 'ಅಭಿಧಾನವಸ್ತುಕೋಶ ಗ್ರಂಥದಲ್ಲಿ ಅವಿಭಿನ್ನಾರ್ಥಕಾಂಡದ ಕೊನೆಯಲ್ಲಿ ಬಂದಿದೆ. ಈ ಗ್ರಂಥಗಳು ಏಕ ಕವಿಕೃತ ಎಂಬುದಕ್ಕೆ ಆಂತರಿಕ ಸಾಕ್ಷಿಯಾಗಿವೆ.

ಕಾವ್ಯಾ, ಅ.ಟಿ. 1 ನಿ ( ಇಚ) 2 ನಾಡೆ ( ಇ)

11. 'ಚ ಪ್ರತಿಯಲ್ಲಿ ಈ ಪದ್ಯದೊಡನೆ ಗ್ರಂಥವು ಸಮಾಪ್ತಿಯಾಗಿದೆ. ಈ ಪದ್ಯ ನಾಗವರ್ಮನ 'ವರ್ಧಮಾನಪುರಾಣಂ' ಕಾವ್ಯದಲ್ಲಿಯೂ ಬಂದಿದೆ. ಆ. ೧೬ - ೪೩.

*ಮ || ಸರಭಸತೆಯಿಂ ಮತ್ತೊಂದಜ್ಞಾನದಿಂದುಚಿತೋಕ್ತಿಯೊಳ್*
*ಪೊರೆಯದಿದು ತಾನಿನ್ನೊಂದೇನಾನುಮಾದೊಡಮಿಲ್ಲಿ ಮ*
*ತ್ಸರವಿರಹಿತರ್ ಪೌರೋಭಾಗ್ಯವ್ಯಪೇತ ಮನಸ್ಕರ*
*ಕ್ಕರಿಗರಧಿಕಪ್ರಜ್ಞರ್ ಕೆಯ್ಕೊಂಡು ತಿರ್ದುಗೆ ದೋಷಮಂ* ೯೬೩

*ಉ || ಮಂದರಶೈಲದಂತೆ ದಿವಿಜಾಪಗೆಯಂತೆ ಪಯೋಧಿಯಂತೆ ಪೆಂ*
*ಪಿಂ ಮೊರೆವೆತ್ತ ದೇವಕುಲದಂತೆ ದಿಶಾಗಜರಾಜಿಯಂತೆ ಸೂ*
*ರ್ಯೇಂದುಗಳಂತೆ ತಾರಗೆಗಳಂತೆ ಸನಾತನವೇದದಂತೆ ನಿ*
*ಲ್ಕೆಂದುಮವಿಘ್ನತಾಪ್ರಸರಮಿಂತಿದು ಕೂರ್ತು ಸಮಸ್ತಧಾತ್ರಿಯೊಳ್*[12] ೯೬೪

*ಛಂದೋವಿಚಿತಿಯಲಂಕೃತಿ*
*ಸಂದಭಿಧಾ[3] (ವಸ್ತು)[3] ಕೋಶಮೆಂಬಿವು ವಾಕ್ ಶ್ರೀ*
*ಸುಂದರಿಗೆ ರತ್ನಮಂಡನ*
*ವಂದದೊಳಿರ್ಪುವು ನಾಗವರ್ಮನ ಕೃತಿಗಳ್* ೯೬೫

ಇದು ಸಕಲಸುಕವಿಜನಮನಸ್ಸರೋಜಿನೀ ರಾಜಹಂಸಾಯಮಾನಾನೂನ ಕವಿತಾ ಗುಣೋದಯ ಶ್ರೀ[4]ಮನ್ನಾಗವರ್ಮ ಪ್ರಣೀತ[4]ಮಪ್ಪ ಕಾವ್ಯಾವಲೋಕನದೊಳ್ ಕವಿಸಮಯಮೆಂಬುದು ಪಂಚಮಾಧಿಕರಣಂ

## *ಕಾವ್ಯಾವಲೋಕನಂ ಸಮಾಪ್ತಂ*

---

*12. ಇದು 'ಛಂದೋಂಬುಧಿ' ಮುಕ್ತಾಯ ಭಾಗದಲ್ಲೂ ಬಂದಿದೆ, ವಾಸ್ತವದಲ್ಲಿ ಇದು ಛಂದೋವಿಚಿತಿಯ ಪದ್ಯ.*

*3ನ . . . (ಅ) 4 ನಾಗವರ್ಮ ವಿರಚಿತ (ಚ)*

'ಅಭಿಧಾನವಸ್ತುಕೋಶ' ಗ್ರಂಥದ ಮೂರು ಅಧ್ಯಾಯ (ಕಾಂಡ) ಗಳಲ್ಲೂ ಮುಕ್ತಾಯದಲ್ಲಿ ಕವಿ ತನ್ನ ಬಗೆಗೆ ಹೇಳಿಕೊಂಡಿದ್ದಾನೆ :

*ಶಾಲಿನಿ || ಇಂತೇಕಾರ್ಥಂ ಭೂರಿಶಬ್ದ ಪ್ರಪಂಚಂ*
*ಸಂತಂ [ ತೇಭ್ಯುಕ್ತಿ ] ಯಿಂದೋದಿಪೇಳ್ದಿಂ*
*ಚಿಂತಾತೀತ ಪ್ರಾಂತ [ ಬಂ ] ಧ್ವಸ್ತದೋಷ*
*ಧ್ವಾಂತಾಂತಂ ಸುಶ್ರೇಯಸ್ಕನಾ ನಾಗವರ್ಮ್ಮ*

*( ಅ.ಕಾಂಡ. ಸಮಾಪ್ತಿ - ೪)*

*ಮ|| ಶ್ರುತದೇವೀಮಕರಂದಕಲ್ಪ ಲಪನಂ . . . .*
*. . . . . ಭೂಭಾಗದೊಳ್‌ನಾಕಿಗಂ ||* [13(a)]

* * * * *

*ವಸಂತತಿಲಕ || ಸಾಮಾನ್ಯ ವಾಚಿಗಳನೀ ತೆಱದಿಂದನನ್ಯಂ*
*ಸಾಮಾನ್ಯ ಮಾನ್ಯ ಸುಚರಿತ್ರಗುಣಾವತಾರಂ*
*ಸಾಮಾನ್ಯಮಪ್ಪ ಜನಮುಂ ತಿಳಿವಂತು ಪೇಳ್ದಿಂ*
*ದಾಮೋದರಪ್ರಿಯಸುತಂ ಕವಿಕರ್ಣ್ಣಪೂರಂ ||*

*(ಸಾಮಾನ್ಯ ಕಾಂಡ - 35, ಪು. 116)*

*ಉ || ಸಾರವಿಚಾರಚಂಚುರಮತಿ ಪ್ರಸರಂ . . . .*
*. . . . ಪಂಡಿತ ನಾಗವರ್ಮ್ಮನಂ ||* [13(b)]

---

*13. ಈ ಪದ್ಯಗಳು ಕಾವ್ಯಾವಲೋಕನ ಹಾಗೂ ವರ್ದ್ಧಮಾನಪುರಾಣಗಳಲ್ಲಿ ಬಂದಿವೆ.*

| | ಕಾವ್ಯಾ | ವ. ಪುರಾಣ |
|---|---|---|
| a) | 779 | ಆ. 16 - 41 |
| b) | 497 | ಆ. 1 - 25 |

* * * * *

*ಮ || ಜಿತಬಾಣಂ ಹರಿಯಂತಧಃ ಕೃತಮಯೂರಂ ತಾರಕಾರಾತಿಯಂ*
*ತತಿ ಮಾಘಂ ಶಿಶಿರಾಂತ್ಯದಂತೆ [ಸುರಪ ಪ್ರೋಚ್ಚಂಡಕೋದಂಡದಂ*
*ತೆ ತಿರೋಭೂತ] ಗುಣಾಢ್ಯನಬ್ಜವನದಂತಾವಿರ್ಭವದ್ದಂಡಿ ಭಾ*
*ರತದಂತಾತ್ತಧನಂಜಯೈಕವಿಭವಂ ವಾಗ್ಗುಂಫದೊಳ್ ನಾಕಿಗಂ ||* [13(c)]

ಕನ್ನಡ ಭಾಷೆಗೆ ಬೇಕಾದ ಎಲ್ಲ ಶಾಸ್ತ್ರಗಳನ್ನು ಒದಗಿಸಿದ ಕೀರ್ತಿಗೆ ಭಾಜನನಾದ ಈ ನಾಗವರ್ಮ್ಮ ಚಾಳುಕ್ಯ ಚಕ್ರವರ್ತಿ ಜಯಸಿಂಹ ಜಗದೇಕಮಲ್ಲನ ಕಟಕಕ್ಕೆ ಆಚಾರ್ಯನಾಗಿದ್ದನೆಂದು ಅನಂತನಾಥ ಪುರಾಣದಲ್ಲಿ ಜನ್ನನು ಹೇಳಿದ್ದಾನೆ. ಅಂತೆಯೇ ಆತ ನಾಗವರ್ಮನು ಒಂದು ಜೈನ ಪುರಾಣವನ್ನು ಕೂಡ ಬರೆದುದಾಗಿ ತಿಳಿಸಿದ್ದಾನೆ :

*ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವ*
*ರ್ಮ್ಮನಿದಾನೀಂತ(ನು) ಶರ್ವ್ವವರ್ಮ್ಮನೆಗಡಂ ಜನ್ನಂಗುಪಾಧ್ಯಾಯ ನಿಂ*
*ದು ನೃಸಿಂಹಕ್ಷಿತಿನಾಥನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ*
*ಕ್ತಿ ನವೀನೋಜ್ವಳ ಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್||*
*ಎನಗನುಕೂಲಮಕ್ಕೆ ಗುಣವರ್ಮ್ಮನ ಜಾಣ್ನುಡಿ ಪಂಪನಿಂಪು ಪೊ*
*ನ್ನನ ಬಗೆ ನಾಗವರ್ಮ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ*
*ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯದೇಸೆ ಪುಷ್ಪಬಾ*
*ಣನ ಮೃದುಬಂಧಮೀ ಕವಿಗಳಲ್ತೆ ಜಿನೇಂದ್ರ ಪುರಾಣ ಕರ್ತೃಗಳ್ ||* [14]

ವರ್ದ್ಧಮಾನಪುರಾಣವು ಶಾ. ಶ. 963 ಅತೀತವಾದ ಮೇಲೆ (ಕಳೆದ

---

*13 c) ಈ ಪದ್ಯವು ಛಂದೋಂಬುಧಿಯ ಕೆಲವು ಪ್ರತಿಗಳಲ್ಲಿ ದೊರೆಯುತ್ತಿದ್ದು 'ಛಂದೋವಿಚಿತಿ' ಗ್ರಂಥಕ್ಕೆ ಸಂಬಂಧಪಟ್ಟು, ಆ ಕೃತಿಯ ಮುಕ್ತಾಯದಲ್ಲಿ ಬಂದಿರಬಹುದು.*

*14. ಅನಂತನಾಥಪುರಾಣಂ (ಸಂ. ಎಚ್. ದೇವೀರಪ್ಪ ಮತ್ತು ಎಂ.ಸಿ. ಪದ್ಮನಾಭಶರ್ಮ), ಆ. ೧ - ೩೪, ೩೫, ಪು. ೬ (1972).*

ಮೇಲೆ) ಬಂದ ಚಿತ್ರಭಾನು ಸಂವತ್ಸರದ ಆಶ್ವಯುಜ ಬಹುಳ ಷಷ್ಠೀ ಪುನರ್ವಸು ನಕ್ಷತ್ರವಿದ್ದ ಬೃಹಸ್ಪತಿವಾರದಂದು ಸಮಾಪ್ತಿಯಾದದ್ದು (ಕ್ರಿ.ಶ. 1042 ಅಕ್ಟೋಬರ್ 7) ಆ ಕೃತಿಯಿಂದ ಸ್ಪಷ್ಟವಿದೆ. ಜಯಸಿಂಹ ಜಗದೇಕಮಲ್ಲ I (ಕ್ರಿ.ಶ. 1013 - 1044) ದೊರೆಯ ಕಟಕಕ್ಕೆ ಉಪಾಧ್ಯಾಯನಾದ ಇಮ್ಮಡಿ ನಾಗವರ್ಮನು ಆತನ ಕಟಕದಲ್ಲಿ (ರಾಜಧಾನಿ ಊರಿನಲ್ಲಿ) ಇದ್ದನು. ಕ್ರಿ.ಶ. 1033ರಿಂದ ಕ್ರಿ.ಶ. 1046ರವರೆಗೆ ಪೊಟ್ಟಲಕೆರೆ (ಪೊಟ್ಟಣಕೆರೆ - ಪಟ್ಟಣಚೆರುವು) ರಾಜಧಾನಿ ಆಗಿದ್ದುದರಿಂದ[15] ಆ ಕಟಕೋಪಾಧ್ಯಾಯ ಆ ಊರು ಎಂದರೆ ಪೊಟ್ಟಲ (ಪೊಟ್ಟಣ) ಕೆರೆ ಸ್ಥಳದಲ್ಲಿ ಇದ್ದನು.

ಹೀಗೆ ಹೇಳುವುದಕ್ಕೆ ಇನ್ನೂ ಒಂದು ಕಾರಣವಿದೆ. ಅದು ಏನೆಂದರೆ ಆತನ ಅತ್ಯಂತ ಮಹತ್ವದ ಬಿರುದು :

'ಕವಿತಾಗುಣೋದಯ' ಎಂಬುದು[16]. ಪಂಪನ ಬಿರುದು 'ಕವಿತಾ ಗುಣಾರ್ಣವ' ಎಂಬುದಕ್ಕೆ ತುಂಬ ಹತ್ತಿರವಾಗಿದೆ. ಪಂಪ ಹಾಗೂ ಇಮ್ಮಡಿ ನಾಗವರ್ಮ ಇವರಲ್ಲಿ ಹಲವು ಸಮಾನ ಅಂಶಗಳಿವೆ. ಇವು ಅವರಿಬ್ಬರನ್ನು ಹತ್ತಿರಕ್ಕೆ ತರುತ್ತವೆ. ಆ ಸಂಗತಿಗಳು -

1) ಪಂಪ ಹಾಗೂ ನಾಗವರ್ಮ ಇಬ್ಬರೂ ಒಂದೇ ಗೋತ್ರದಲ್ಲಿ

---

*15. a) ಶಾಸನ ಅಧ್ಯಯನ ನಿಯತಕಾಲಿಕ (ಪತ್ರಿಕೆ) ಸಂಪುಟ - ೨, ಸಂಚಿಕೆ - ೧, ಲೇಖನ : ಕಲ್ಯಾಣದ ಚಾಲುಕ್ಯರು : ಕೆಲವು ಹೊಸ ಸಂಗತಿಗಳು, ಪು. 42 - 43.*

*b) S.I.I. Vol. IX, pt. I, No. 98, pp. 68 - 69.*

*16. ಈ ನಾಗವರ್ಮನಿಗೆ ಹಲವು ಬಿರುದುಗಳಿದ್ದವು:*

*i) ಕವಿತಾಗುಣೋದಯ, ii) ಕವಿಕರ್ಣಪೂರ, iii) ಬುಧಸರೋಜಿನೀವನಹಂಸ, iv) ಗುಣರತ್ನಸಾಗರ, v) ಸಮ್ಯಕ್ತ ರತ್ನಾಕರ, vi) ಕವಿಕಂಠಾಭರಣ - ಉಪಲಬ್ಧವಾದ ಮೂರೂ ಕೃತಿಗಳ ಪುಷ್ಪಿಕಾ ಗದ್ಯಗಳಲ್ಲಿ 'ಕವಿತಾ ಗುಣೋದಯ' ಎಂಬುದು ತಪ್ಪದೆ ಬಂದಿದೆ. ಇದು ಗಮನಿಸಬೇಕಾದ ಸಂಗತಿ.*

ಹುಟ್ಟಿದ್ದಾರೆ. ಅದೆಂದರೆ 'ವತ್ಸಗೋತ್ರ' ಅಥವಾ 'ಶ್ರೀವತ್ಸಗೋತ್ರ' ಅರ್ಥಾತ್ ಜ್ಞಾತಿಗಳು. [17]

a) ನಯಶಾಲಿ ವತ್ಸಗೋತ್ರ ಶ್ರಯಣೇಯನ್ - ವಿಕ್ರಮಾರ್ಜುನ ವಿಜಯ ಆ. 14 - 42.

b) ಜಿನವಲ್ಲಭನ ವೃಷಭಾದ್ರಿ (ಗಂಗಾಧರಂ ಅಥವಾ ಕುರ್ಕ್ಯಾಲ) ಶಾಸನ :

*ಓಂ ನಮಃ ಸಿದ್ಧೇಭ್ಯಃ ಸ್ವಸ್ತಿ ಸಕಳ ಕಳಾಪ*
*ಪ್ರವೀಣಂ ಭವ್ಯರತ್ನಾಕರ ಗುಣಪಕ್ಷಪಾತಿ*
*ಬೆಂಗಿನಾಡ ಸಪ್ತಗ್ರಾಮಂಗಳೊಳಗಣ ವಂಗಿಪಟ್ಟಿ*
*ಕಮ್ಮೆ ಬ್ರಾಹ್ಮಣಂ ಜಮದಗ್ನಿ ಪಂಚಾರ್ಷೇಯ*
*ಶ್ರೀವತ್ಸಗೋತ್ರಂ . . . . ಇತ್ಯಾದಿ*

c) ನಾಗವರ್ಮನ ವರ್ಧಮಾನಪುರಾಣ :

ಸುಚ (ರಿತ್ರಂ ವ) ತ್ಸಗೋತ್ರಂ (ಮ) ಹ ಮಹಿಮ ಗುಣೋದ್ದಾಮ ದಾಮಾಗ್ರಪುತ್ರಂ - ಆ. 16 : 39

ಕವಿತಾಗುಣೋದಯ ಎಂಬ ಬಿರುದು ಉಪಲಬ್ಧವಾಗಿರುವ ಮೂರೂ ಕೃತಿಗಳಲ್ಲಿ ಕಾಣದೊರೆಯುತ್ತದೆ.

a) ವರ್ಧಮಾನಪುರಾಣ : ಆ. ೧ - ೨೨, ೨೭. ಆ. ೧೬ - ೪೮

b) ಕಾವ್ಯಾವಲೋಕನಂ, ಪದ್ಯಸಂಖ್ಯೆ - ೪೨೨, ೪೯೬ ಹಾಗೂ ೭೭೮

c) ಮೂರು ಕೃತಿಗಳಲ್ಲಿ ಬಂದಿರುವ ಪುಷ್ಟಿಕಾ ಗದ್ಯ ಭಾಗಗಳು (Colophons).

---

*17. ಬಂಧು ಸನಾಭಿ ಸಗೋತ್ರಂ*

*ಬಾಂಧವನಾತ್ಮೀಯನೆನಿಸುಗುಂ ಜ್ಞಾತಿಯವಂ* || *೨೮ - ೨೯ . . . ಇತ್ಯಾದಿ*

*ಅಭಿಧಾನವಸ್ತುಕೋಶ. ಪು. ೫೬*

'ಕವಿತಾಗುಣೋದಯ' ಮತ್ತು 'ಕವಿತಾಗುಣಾರ್ಣವ' ಬಿರುದುಗಳಲ್ಲಿ 'ಕವಿತಾಗುಣಾರ್ಣವ' ಹೆಚ್ಚು ದೊಡ್ಡದು. ಪಂಪ ದೊಡ್ಡ ಕವಿ ಎನ್ನುವುದರಲ್ಲಿ ನಾಗವರ್ಮನಿಗೂ ಸಂದೇಹವಿಲ್ಲ.

*ಆದಿಜಿನನಾಥಚರಿತಮ*
*ನಾದಮ್ಮೆದಚ್ಚರೀತಿಯೊಳ್ ಪುದಿವಿನಮು*
*ತ್ಪಾದಿಸಿದ ಪಂಪನಂತುದಿ*
*ತೋದಿತಮ್ಮ (ದು) ವಚನ ಗುಣ್ಪನಾವನುಮೊಳನೇ ||*[18]

ಗೋತ್ರಬಾಂಧವರಾದ ಈ ಇಬ್ಬರೂ ಒಂದು ದೃಷ್ಟಿಯಲ್ಲಿ ನೋಡಿದಾಗ ದಾಯಾದಿಗಳು; ದೂರದ ತಲೆಮಾರಿನವರಿರಬಹುದು. ಇಬ್ಬರೂ ವ್ಯುತ್ಪನ್ನ ಪ್ರತಿಭಾನ್ವಿತ ಕವಿಗಳು. ಪಂಪ ಹೆಚ್ಚು ಕಾವ್ಯಗಳನ್ನು ಓದಿದ್ದಾನೆ; ನಾಗವರ್ಮ ಶಾಸ್ತ್ರಗಳನ್ನು ಓದಿದ್ದಾನೆ.[19] ತೋಲನ ವಿಮರ್ಶೆಯ ಕಣ್ಣಿನಿಂದ ಕೃತಿಗಳನ್ನು ಅವಲೋಕಿಸಬೇಕು. ಪಂಪನ ವತ್ಸಗೋತ್ರದ ಬಾಂಧವರು ಪೊಟ್ಟಲಕೆರೆಯಲ್ಲಿ ಇದ್ದರು. ಪಂಪನ ಮೊಮ್ಮಗನೆಂದು ಹೇಳಿಕೊಂಡಿರುವ ಬ್ರಹ್ಮಶಿವನು ವತ್ಸಗೋತ್ರದವನೂ ಅಹುದು, ನೋಡಿ -

*ಇಳೆಯೊಳ್ಸಲೆ ನೆಲಸಿದಪೊ*
*ಟ್ಟಳಗೆಜೆಯೊಳ್ಳಿಗ(ಟ್ಟಿ) ಸಿಂಗರಾಜನಸುತನ*
*ಗ್ಗಳದೇವನಕಳೆಯಂ ದ್ವಿಜ*
*ಕುಳರತ್ನಂ ವತ್ಸಗೋತ್ರ ತಿಳಕಂ ಬ್ರಹ್ಮಂ ||*[20]

ಪಂಪ, ಜಿನವಲ್ಲಭ, ಇಮ್ಮಡಿ ನಾಗವರ್ಮ, ಬ್ರಹ್ಮಶಿವ ಇವರದು

---

*18. ವರ್ಧಮಾನಪುರಾಣಂ, ಆ. ೧ - ೬, ಪು. ೪.*

*19. ಪಂಪನ ಮೇಲೆ ಕಾಳಿದಾಸ ಮೊದಲಾದ ಕವಿಗಳ ಪ್ರಭಾವ ಹೆಚ್ಚಿದೆ. ನಾಗವರ್ಮನ ಬರವಣಿಗೆಯಲ್ಲಿ ಭಾಮಹ, ದಂಡಿ ಮೊದಲಾದವರ ಪ್ರಭಾವ ಹೆಚ್ಚಿದೆ.*

*20. ಸಮಯಪರೀಕ್ಷೆ (ಸಂ. ಬಿ.ಎಸ್. ಕುಲಕರ್ಣಿ), ಅಧಿ. ೧ - ೫೭, ಪು. ೧೦.*

ಒಂದೇ ಗೋತ್ರ - 'ವತ್ಸಗೋತ್ರ' 'ಶ್ರೀವತ್ಸಗೋತ್ರ' - ಅಥವಾ ಜಮದಗ್ನಿ ಪಂಚಾರ್ಷೇಯ ಶ್ರೀವತ್ಸಗೋತ್ರ ಎಂಬ ಒಂದು ಗೋತ್ರದಲ್ಲಿ ಜನಿಸಿದ ಸಾಹಿತಿಗಳ ಪರಂಪರೆ.

(2) ಪಂಪ 'ಕವಿತಾಗುಣಾರ್ಣವ'; ಇಮ್ಮಡಿ ನಾಗವರ್ಮ 'ಕವಿತಾಗುಣೋದಯ'. ಪಂಪನಿಗೆ ಈ ಬಿರುದು ಅವನ ಆಶ್ರಯದಾತ 'ಜಗದೇಕಮಲ್ಲ' ಬಿರುದಿನ[21] ಇಮ್ಮಡಿ ಅರಿಕೇಸರಿ ಎಂಬ ದೊರೆ ಕೊಟ್ಟಿದ್ದನು. ಅರ್ಥಾತ್ ಪಂಪ ಜಗದೇಕಮಲ್ಲ ಅರಿಗ \ ಹರಿಗನಿಂದ ಸನ್ಮಾನಿತನಾಗಿದ್ದ ಮತ್ತು ಆತನ ಆಸ್ಥಾನದಲ್ಲಿ ಆ ಬಿರುದನ್ನು ಪಡೆದ. ನಾಗವರ್ಮ ಸಹ 'ಜಗದೇಕಮಲ್ಲ' ಬಿರುದಿನ ಜಯಸಿಂಹನಿಂದ 'ಕವಿತಾಗುಣೋದಯ' ಎಂಬ ಬಿರುದನ್ನು ಪಡೆದಿದ್ದಾನೆ. ಪಂಪ ತನ್ನ ಕಾಲದ ಪಂಡಿತರಿಂದ ಪ್ರಶಂಶಿತನಾದರೆ, ನಾಗವರ್ಮ ತನ್ನ ಕಾಲದ ಪಂಡಿತರಿಂದ, ರಾಜರಿಂದ ಸನ್ಮಾನಿತನಾದ :

*ಅಭಿಮತ ಶಬ್ದ ಸಂಸ್ಮರಣದಿಂ ಜನಮಂ ತಿಳಿವಂತು ಮಾಡಿ ವಾ*
*ಗ್ವಿಭವಮದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯಂತನೆಯ್ದೆ ತ*
*ತ್ಸಭೆಯೊಳಗಗ್ರಪೂಜೆವಡೆದೊಂದು ಮಹಾಮಹಿಮಾನುಭಾವದಿಂ*
*ದಭಿನವಶರ್ವವರ್ಮನಿವನೆಂದಪುದುರ್ವರೆ ನಾಗವರ್ಮನಂ ||*[22]

- 'ಕಾತಂತ್ರ' ವ್ಯಾಕರಣದ ಕರ್ತೃ ಶರ್ವವರ್ಮ ಪಂಡಿತನ ಹಾಗೆ. ಇದೀಗ ನಾಗವರ್ಮನು ಅಂತಹುದೇ ವ್ಯಾಕರಣ 'ಶಬ್ದಸ್ಮೃತಿ' ಇತ್ಯಾದಿ

---

*21. ವಿಕ್ರಮಾರ್ಜುನವಿಜಯಂ (ಸಂ. ಬೆಳ್ಳಾವೆ ವೆಂಕಟನಾರಣಪ್ಪ) ಆ. ೧ - ೧೪ರ ವಚನ. ಜಯಸಿಂಹ ಚಕ್ರವರ್ತಿ ಬೋಧನ ಅಥವಾ ವೇಮುಲವಾಡ ಚಳುಕ್ಯರ ಮನೆತನವನ್ನು ಸೋಲಿಸಿ ಅವರ 'ಜಗದೇಕಮಲ್ಲ' ಎಂಬ ಬಿರುದನ್ನು ತಳೆದಿದ್ದಾನೆ, ಇಲ್ಲವೇ ಆತನ ತಂದೆಯಾದರೂ ಹಾಗೆ ಮಾಡಿರಲೇಬೇಕು. ಈ ಎರಡೂ ಒಂದೇ ಚಾಳುಕ್ಯ ಕುಟುಂಬದ ಶಾಖೆಗಳಾದುದರಿಂದ ಹೆಣ್ಣು ಕೊಟ್ಟು ತರುವಂತಿಲ್ಲ. ತಾಯಿಯ ತವರು ಮನೆಯ ಬಿರುದಾವಳಿ ಬರುವಂತಿಲ್ಲ. ......................ಕಾವ್ಯಾ. ಪದ್ಯ - ೪೨೩, ಪು. ೯೧.*

ರಚಿಸಿ ಅಭಿನವ ಶರ್ವವರ್ಮ ಎಂಬ ಬಿರುದಿಗೆ ಭಾಜನನಾಗಿದ್ದಾನೆ. ವಾಸ್ತವದಲ್ಲಿ ವ್ಯಾಕರಣ, ಛಂದಸ್ಸು (ಛಂದೋವಿಚಿತಿ)[23] ಅಲಂಕಾರ, ಕೋಶ ಹಾಗೂ ಕಾವ್ಯಗಳನ್ನು ರಚಿಸಿ 'ಕನ್ನಡ' ಭಾಷೆಯನ್ನು ಸರ್ವತೋಮುಖವಾಗಿ ಬೆಳೆಸಿ ಅದಕ್ಕೆ ಶಾಸ್ತ್ರೀಯತೆಯನ್ನು ಒದಗಿಸಿಕೊಟ್ಟ ಮಹಾನುಭಾವ - ನಾಗವರ್ಮ.

3) ಪಂಪನ ಗುರುಪರಂಪರೆಯಲ್ಲಿ 'ಜಯನಂದಿ' ಯತಿಗಳಿಗೆ ಒಂದು ವಿಶಿಷ್ಟ ಸ್ಥಾನ :

*ಎಮಗೆ ಮಲಧಾರಿ ಸಿದ್ಧಾಂ*
*ತಮುನೀಶ್ವರಚರಣಸರಸಿಜಾತಂ ದೇವೇಂ*
*ದ್ರಮುನಿಪದಾಬ್ಜಂ ಜಯನಂ*
*ದಿಮುನಿಕ್ರಮಕಮಳಮೀಗೆ ಬೋಧೋದಯಮಂ ||*

ಈ ಮುನಿಜನಗಳು ಓದಿಸಿದ ಪದ್ಧತಿಯಲ್ಲೇ ತಾನು, ಕೊಂಡ ಕುಂದಾನ್ವಯನಂದನವನ ಶುಕನಾಗಿ - ಪಂಡಿತವಕ್ಕಿಯಾಗಿ - ಆದಿಪುರಾಣ ಕೃತಿಯನ್ನು ರಚಿಸಿದ್ದಾನೆ. ಇಲ್ಲಿ ಬಂದಿರುವ ಜಯನಂದಿ ಮುನಿಗಳು, ಪಂಪನ ತಮ್ಮನೆಂದು ಹೇಳಿಕೊಂಡಿರುವ (ಪಂಪನು ಹೇಳದ), ಜಿನವಲ್ಲಭನಿಗೂ ಗುರುವಾಗಿದ್ದಾರೆ. ಬ್ರಹ್ಮಶಿವನು ತನ್ನ ಕೃತಿ ಸಮಯ ಪರೀಕ್ಷೆಯನ್ನು

---

*23. 'ಛಂದೋವಿಚಿತಿ' ಗ್ರಂಥ ದೊರೆಯದಿದ್ದರೂ, ಈಗಾಗಲೇ ದಿ. ಪ್ರೊ. ತೀ.ನಂ.ಶ್ರೀ ಸೂಚಿಸಿದಂತೆ ಅದು 'ಛಂದೋಂಬುಧಿ' ಗ್ರಂಥದಲ್ಲಿ ಮಿಳಿತವಾಗಿದೆ ಎನ್ನುವುದು ನೂರಕ್ಕೆ ನೂರು ಸತ್ಯ. ಏಕೆಂದರೆ, ಅದರಲ್ಲಿ ಮುಕ್ತಾಯದ ಗದ್ಯ ಈಗ ಉಪಲಬ್ಧವಾಗಿರುವ 'ಅಭಿಧಾನವಸ್ತುಕೋಶ, 'ಕಾವ್ಯಾವಲೋಕನ ಮತ್ತು 'ವರ್ಧಮಾನಪುರಾಣಂ' ಗ್ರಂಥಗಳಂತೆ ಜಿನಸ್ತುತಿ ಇತ್ಯಾದಿಗಳಿಂದ ಕೂಡಿಲ್ಲ. ಕೆಲವು ಪದ್ಯಗಳು (ನಾಲ್ಕೈದು) ಪ್ರತಿಕಾರರ ಅಚಾತುರ್ಯದಿಂದ ಛಂದೋಂಬುಧಿಯಲ್ಲಿ ಪ್ರತಿಮಾಡಲ್ಪಟ್ಟಿರಬಹುದು. 'ಮಂದರಶೈಲದಂತೆ' (ಕಾವ್ಯಾ. 964) . . . . ಇತ್ಯಾದಿ.*

*"ಇದು ಭಗವದರ್ಹತ್ಪರಮೇಶ್ವರ ಚರಣಸ್ಮರಣ ಪರಿಣತಾಂತಃಕ ರಣ ವೀರಣಂದಿಮುನೀಂದ್ರ ಚರಣಸರಸೀರುಹ ಷಟ್ಚರಣ . . . . . ಮಹಾಕವಿ ಬ್ರಹ್ಮದೇವ ನಿರೂಪಣಂ "- ಇತ್ಯಾದಿ*

ಹೀಗೆಯೇ 15 ಅಧಿಕಾರಗಳಲ್ಲೂ 'ವೀರಣಂದಿ' ಯತಿವರರನ್ನು ಪುಷ್ಪಿಕಾಗದ್ಯದಲ್ಲಿ ವಿನಯಪೂರ್ವಕ ನಮಿಸಿದ್ದಾನೆ - ತಾನು ಅವರ ಚರಣ ಕಮಲದಲ್ಲಿರುವ ಭೃಂಗ - ಎಂದಿದ್ದಾನೆ.

'ಪಂಪ' ನಂದಿಸಂಘದ ಗುರುಗಳ ಚರಣ ಕಮಲಗಳಲ್ಲಿ ಕುಳಿತು ಪಾಠ ಕಲಿತಿದ್ದಾನೆ. ಆ ನಂದಿಸಂಘ ಕೊಂಡಕುಂದ ಎಂಬ ಅಪರ ನಾಮವನ್ನುಳ್ಳ 'ಪದ್ಮನಂದಿ' ಮುನಿಗಳಿಂದ ಆರಂಭವಾಗಿ ಬೆಳೆದುಕೊಂಡು ಬಂದಿದೆ. ಸೇನಸಂಘ, ನಂದಿಸಂಘ, ಯಾಪನೀಯಸಂಘ ಮುಂತಾಗಿ ಜೈನ ಯತಿ ಪರಂಪರೆಯಲ್ಲಿ ಬೇರೆ ಬೇರೆ ಸಂಘಗಳಿಗೆ, ಗುರುಪೀಠಗಳ ಸಂತತಿಗಳ (ಶಿಷ್ಯ ಪರಂಪರೆ) ಬೃಹತ್ ಬೆಳವಣಿಗೆಗಳಿವೆ. ಅರ್ಥಾತ್ ಒಳಭೇದಗಳಿವೆ. ದಿಗಂಬರ ಜೈನಪಂಥ, ಶ್ವೇತಾಂಬರ ಪಂಥ, ಯಾಪನೀಯ ಸಂಘ ಮತ್ತು ಪ್ರಾದೇಶಿಕ (ದ್ರವಿಡ) ಇತ್ಯಾದಿ. ಪದ್ಮನಂದಿ, ಜಯನಂದಿ, ಗುಣನಂದಿ, ವೀರಣಂದಿ, ಕನಕಣಂದಿ | ನಂದಿ, ಹೀಗೆಯೇ ಹಲವಾರು ಯತಿಗಳು ದಿಗಂಬರ ಪಂಥದಲ್ಲಿ ಆಗಿಹೋಗಿದ್ದಾರೆ. ಪಂಪ ಹಾಗೂ ನಾಗವರ್ಮರು ಈ ಪರಂಪರೆಯ ದಿಗಂಬರ ಯತಿಗಳನ್ನು ಪೂಜಿಸಿದ್ದಾರೆ. ಅವರ ಚರಣಕಮಲಗಳಲ್ಲಿ ಭೃಂಗಗಳಾಗಿ ಮೆರೆದಿದ್ದಾರೆ. ಆದಿನಾಥ ಹಾಗೂ ಅಂತಿಮ ತೀರ್ಥಂಕರ ವೀರನಾಥರನ್ನು ವಿಶೇಷವಾಗಿ ಪೂಜಿಸಿದ್ದಾರೆ; ಪುರಾಣಗಳನ್ನು ಬರೆದಿದ್ದಾರೆ. ಸೇನಸಂಘದವರೂ ಇವರಿಗೆ ಹತ್ತಿರದವರಾಗಿದ್ದಾರೆ. 'ಮಹಾಪುರಾಣ' ಗ್ರಂಥದ ಕಥಾವಿಸ್ತರಣೆಯ ಪ್ರಸಂಗದಲ್ಲಿ ಪಂಪ ಹಾಗೂ ನಾಗವರ್ಮ ಇಬ್ಬರೂ ವೀರಸೇನ ಹಾಗೂ ಜಿನಸೇನರವರೆಗಿನ ಪದ್ಧತಿಯನ್ನು ಜ್ಞಾಪಿಸಿಕೊಂಡಿದ್ದಾರೆ. ಇದರಿಂದ ವೀರಸೇನರು 'ಮಹಾಪುರಾಣ' ಕೃತಿಯನ್ನು ರಚಿಸಿದರೆ? ಎಂಬ ಪ್ರಶ್ನೆ ನಮ್ಮ

ಮುಂದೆ ನಿಲ್ಲುತ್ತದೆ. ಶಿಷ್ಯರಿಗೆ ಆ ಮಹಾನುಭಾವರು ಪುರಾಣ ಕಥಾಸಾಗರವನ್ನು ವಿವರಿಸಿದ್ದರೆ ಅದರಲ್ಲಿ ಅಚ್ಚರಿಪಡುವಂತಹದ್ದೇನು ಇಲ್ಲ.

ಪಂಪನ ವಂಶಸ್ಥರು ಈಗಿನ ಆಂಧ್ರಪ್ರದೇಶದ ಪೊಟ್ಟಲಕೆರೆಯಲ್ಲಿ (ಪಟ್ಟಣಚೆರುವಿನಲ್ಲಿ) ಇದ್ದರೆಂಬುದರಲ್ಲಿ ಸಂದೇಹವಿಲ್ಲ ಮತ್ತು ಅವನ ಪೂರ್ವಜರು ಗುಂಡ್ಲುಕಮ್ಮ ನದಿಯ ಎಡಬದಿಯಲ್ಲಿ ವಾಸಿಸಿದ್ದರೆಂದು ಹೇಳಬಹುದು. ಸಂಶೋಧನೆಯಲ್ಲಿ ಇನ್ನಷ್ಟು ಸಂಗತಿಗಳು ಹೊರಬರುತ್ತವೆ.

ಈ ನಾಗವರ್ಮ ತನ್ನ ಪೂರ್ವಜರ ಬಗ್ಗೆ ವಿಶೇಷ ವಿವರಗಳನ್ನು ನೀಡಿಲ್ಲ. ತನ್ನ ಜೀವನದಲ್ಲಿ ವಿಕ್ರಮ ಸಂವತ್ಸರಗಳ ಪ್ರಚಯ ಇದ್ದಿತೆಂದು ಹೇಳಿದ್ದಾನೆ. ಕಾರಣ, ಕ್ರಿ.ಶ. 1040ರ ಹಾಗೂ ತತ್ಪೂರ್ವದಲ್ಲಿ ಬಂದ ಕ್ರಿ.ಶ. 980ರ ವಿಕ್ರಮ ಸಂವತ್ಸರಗಳನ್ನು ಇಲ್ಲಿ ಲೆಕ್ಕಕ್ಕೆ ತಂದುಕೊಳ್ಳಬಹುದು. ಏಕೆಂದರೆ ಕ್ರಿ.ಶ. 1042ರಲ್ಲಿ ಬಂದ ಚಿತ್ರಭಾನು ಸಂವತ್ಸರದಲ್ಲಿ ವರ್ಧಮಾನಪುರಾಣವನ್ನು ಸಮಾಪ್ತಿಗೊಳಿಸಿದ್ದಾನೆ. ಆಗ ಆತನಿಗೆ 62 ವರ್ಷ ಇರಬಹುದು, ಖಚಿತವಾಗಿ ಹೇಳಲು ಬರುವುದಿಲ್ಲ. ಆತ ತನ್ನ ಬಗ್ಗೆ ಕೊಟ್ಟ ತನ್ನ ಜೀವನದ ವಿವರಗಳು ಹೀಗಿವೆ :

ವತ್ಸಗೋತ್ರದಲ್ಲಿ ಹುಟ್ಟಿದವನು ತಂದೆ -
ದಾಮೋದರ
ಹೆಂ. ವೀರಕಬ್ಬೆ

ನಾಗವರ್ಮ (ಅಗ್ರತನಯ) ಇತರರು (?)

ಹೆಂ. (?)

ಮಧು

ಈತನ ಗುರುಗಳು ವೀರಭಟ್ಟಾರಕರು ಮತ್ತು ವಾದಿರಾಜರು. ಅವರ ಹಿರಿಮೆ ಗರಿಮೆಗಳು, ಸಾಹಿತ್ಯ ಸೇವೆಗಳು, ಬೇರೊಂದು ಗ್ರಂಥದ ವಿಷಯಗಳು. ವಾದಿರಾಜರು ತಮ್ಮ ಕಾಲದ ಘನವಿದ್ವಾಂಸರಾಗಿದ್ದರು. ಕಾವ್ಯಾವಲೋಕನದ 188ನೇ ಪದ್ಯದಲ್ಲಿ ಅವರನ್ನು ನಾಗವರ್ಮ 'ಅದ್ವೈತ' ವಾದವನ್ನು ಮಂಡಿಸುವ ಗುಂಪಿನ ಆನೆಗಳಿಗೆ ಸಿಂಹ ಇದ್ದಂತೆ ಇದ್ದ 'ಸ್ಯಾದ್ವಾದಾಚಲ ಸಿಂಹ' ಎಂದು ವರ್ಣಿಸಿದ್ದಾನೆ.

## III

ಇಮ್ಮಡಿ ನಾಗವರ್ಮನು ಬರೆದ ಅವನೇ ತಿಳಿಸಿದ ನಾಲ್ಕು ಕೃತಿಗಳಲ್ಲಿ ಸದ್ಯ ಮೂರು ಕೃತಿಗಳು ಉಪಲಬ್ಧವಾಗಿವೆ. ಇವುಗಳಲ್ಲಿ ವರ್ಧಮಾನಪುರಾಣ (ಶಾ. ಶ. 963, ಚಿತ್ರಭಾನು ಸಂವತ್ಸರ, ಆಶ್ವಯುಜ ಬಹುಳ ಷಷ್ಟೀ ಪುನರ್ವಸು ನಕ್ಷತ್ರ ಗುರುವಾರ = 07-10-1042 A.D.) ಕಾವ್ಯವನ್ನು ಸಮಾಪ್ತಿಗೊಳಿಸಿದುದನ್ನು ತಿಳಿಸಿದ್ದಾನೆ. ಮಿಕ್ಕವುಗಳು ಸಮಾಪ್ತಿಗೊಂಡ ಸಂಗತಿಗಳು ಸದ್ಯ ಉಪಲಬ್ಧವಿಲ್ಲ. ಆದುದರಿಂದ ತಾತ್ಪೂರ್ತಿಕವಾಗಿ ಕೆಳಗಿನ ಕ್ರಮದಲ್ಲಿ ಗ್ರಂಥಗಳನ್ನು ವಿವರಿಸುತ್ತೇನೆ (ಕಾವ್ಯಾವಲೋಕನ ಪದ್ಯ, 965):

1. **'ಛಂದೋವಿಚಿತಿ'** ಛಂದಃಶಾಸ್ತ್ರದ ಗ್ರಂಥ. ಸದ್ಯ ಉಪಲಬ್ಧವಿಲ್ಲ.

2. **ಅಭಿಧಾನವಸ್ತುಕೋಶ :** ಸದ್ಯ ದೊರಕಿದ ಕನ್ನಡದ ಮೊದಲನೆಯ ನಿಘಂಟು. ಇದನ್ನು ಕಂದವೃತ್ತ ಹಾಗೂ ದೇಶೀಯ ಛಂದಗಳಾದ ಅಕ್ಕರ ಮತ್ತು ತ್ರಿಪದಿಗಳಲ್ಲಿ ಬರೆಯಲ್ಪಟ್ಟಿದೆ. ಕಂದಗಳೇ ವಿಶೇಷ ಆಗಿದ್ದು ಖ್ಯಾತ ಕರ್ನಾಟಕ ವೃತ್ತಗಳಾದ ಉತ್ಪಲಮಾಲೆ, ಚಂಪಕಮಾಲೆ, ಶಾರ್ದೂಲ ವಿಕ್ರೀಡಿತ, ಮತ್ತೇಭ ವಿಕ್ರೀಡಿತ, ಸ್ರಗ್ಧರೆ ಹಾಗೂ ಮಹಾಸ್ರಗ್ಧರೆ ಛಂದಸ್ಸುಗಳೊಂದಿಗೆ ಮಾಲಿನಿ, ಶಾಲಿನಿ, ಮಂದಾಕ್ರಾಂತ, ವಸಂತತಿಲಕ, ಶಿಖರಿಣಿ, ಹರಿಣಿ, ಪ್ರಹರ್ಷಿಣಿ,

ವಂಶಸ್ಥ, ಉಪೇಂದ್ರ ವಜ್ರ, ಉಪಜಾತಿ, ಸಮ, ಅರ್ಧಸಮ ವೃತ್ತಗಳನ್ನೂ ಬರೆಯಲಾಗಿದೆ. ವಸ್ತುಕೋಶ ಎಂದರೆ ಪದಾರ್ಥಗಳನ್ನು ಸಂಗ್ರಹಿಸಿಟ್ಟಿರುವ ಎಡೆ. ಪ್ರಕೃತ ಅಭಿಧಾನವಸ್ತುಕೋಶವೆಂಬ ಈ ಶಬ್ದಕ್ಕೆ (ಅಭಿಧಾನಗಳ = ಹೆಸರು - ಅರ್ಥಗಳ) ಪದಾರ್ಥಗಳ ಸ್ವರೂಪವನ್ನು ತಿಳಿಸುವ ಶಬ್ದಗಳನ್ನು ತಿಳಿಸುವ ಸಂಗ್ರಹ = ಗ್ರಂಥ ಎಂದು ಹೇಳಬಹುದು. ನಮಗೆ ಬರವಣಿಗೆಗೆ - ಸಾಹಿತ್ಯಕ್ಕೆ ಬೇಕಾಗುವ ಶಬ್ದಾರ್ಥಗಳ ಸಾಧನ ಸಾಮಗ್ರಿ, ವ್ಯವಹಾರ ಯೋಗ್ಯವಾದ ಅವಿಭಿನ್ನಾರ್ಥಕ, ಸಮಾನಾರ್ಥಕ ಹಾಗೂ ನಾನಾರ್ಥಗಳ, ವಾಚ್ಯ ವಾಚಕಗಳ, ಭಾವವನ್ನು ತಿಳಿಸುವ ಶಬ್ದಗಳ ಸಂಗ್ರಹ. ಅವನೇ ಹೇಳಿರುವಂತೆ -

*ವರರುಚಿ ಹಲಾಯುಧ ಭಾ*
*ಗುರಿ ಶಾಶ್ವತಮಮರಕೋಶಮೆಂಬಿವು ಮೊದಲಾ*
*ಗಿರೆ ಪೂರ್ವಶಾಸ್ತ್ರಮಂ ಸಂ*
*ಹರಿಸಿ ಮನಂಗೊಳೆ ನಿಘಂಟುವಂ ವಿರಚಿಸುವೆಂ* || *(1 - 2)*

ವರರುಚಿ, ಹಲಾಯುಧ, ಭಾಗುರಿ, ಶಾಶ್ವತ ಮತ್ತು ಅಮರಸಿಂಹ (ಅಮರಕೋಶಕಾರ) ಮೊದಲಾದವರ ನಿಘಂಟುಗಳನ್ನು ಅವಲೋಕಿಸಿ ಅವೆಲ್ಲವುಗಳನ್ನು ಒಳಗೊಂಡಂತೆ ಓದುಗರೆಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಕನ್ನಡ ಭಾಷೆಯಲ್ಲಿ ಬರೆದುದಾಗಿ ತಿಳಿಸಿದ್ದಾನೆ. ಗ್ರಂಥವು ಮೂರು ಕಾಂಡಗಳಲ್ಲಿ - I ಅವಿಭಿನ್ನಾರ್ಥಕಾಂಡ, II ಸಾಮಾನ್ಯ ಕಾಂಡ ಹಾಗೂ III ನಾನಾರ್ಥಕಾಂಡ - ಬರೆಯಲ್ಪಟ್ಟಿದೆ.

I ಅವಿಭಿನ್ನಾರ್ಥಕಾಂಡದಲ್ಲಿ 'ಸ್ವರ್ಗವರ್ಗ', 'ಕಾಲವರ್ಗ', 'ಸಂಸರಣ ವರ್ಗ', 'ಸಲಿಲವರ್ಗ', 'ಭೂವರ್ಗ', 'ಧಾತುವರ್ಗ', 'ವನವರ್ಗ', ವೃಕ್ಷಾದಿವರ್ಗ', ವೃಗಪಕ್ಷಿವರ್ಗ', 'ಪುರಗೃಹೋಪಕರಣಾದಿವರ್ಗ', 'ಮನುಷ್ಯವರ್ಗ', 'ದೇಹಾವಯವಾದಿವರ್ಗ', 'ಭೂಷಣಾದಿವರ್ಗ', 'ಸಮರಾದಿ ಸಂಪ್ರಕೀರ್ಣವರ್ಗ', 'ಪಶುವರ್ಗ', ಧಾನ್ಯವರ್ಗ' ಮುಂತಾಗಿ ೧೬ ವಿಭಾಗಗಳಿವೆ.

II ಸಾಮಾನ್ಯಕಾಂಡದಲ್ಲಿ 'ವಿಶೇಷಣವರ್ಗ', 'ವಿಶೇಷ್ಯವರ್ಗ' ಎಂಬ ಎರಡು ಕಾಂಡಗಳಿವೆ.

III ನಾನಾರ್ಥ ಕಾಂಡದಲ್ಲಿ ಹಲವು ಶಬ್ದಗಳು ಕೇವಲ ಏಕರೂಪದಲ್ಲಿ, ಏಕಶಬ್ದದಲ್ಲಿ ಹಲವು ಅರ್ಥಗಳು ಬರುವಂತೆ ನಿರೂಪಿಸಲಾಗಿದೆ. 'ಜಿನರರ್ಹತ್ಸುಗತರ್' ಎನ್ನುವ ರೀತಿಯಲ್ಲಿ. ಭಟ್ಟಹಲಾಯುಧನ 'ಗುಣೋದಯ' ಎಂಬ ಬಿರುದು ಈತನ ಬಿರುದು 'ಕವಿತಾಗುಣೋದಯ' ಎಂಬುದರಲ್ಲಿ ಪ್ರತಿಫಲಿಸಿ ನಿಂತಿದೆ.

## ವರ್ದ್ಧಮಾನಪುರಾಣಂ

೨೪ ಜನ ತೀರ್ಥಂಕರರಲ್ಲಿ ಕೊನೆಯವನು ವರ್ದ್ಧಮಾನ ತೀರ್ಥಂಕರ. ಆತನ ಕುರಿತು ಬರೆದ ಪುರಾಣ ಕಾವ್ಯ. ತಾನು ಬರೆದ ಈ ಪುರಾಣಕ್ಕೆ ಆಧಾರ ಆದಿ ಕವೀಶ್ವರ ಇಂದ್ರನಂದಿಗಣಧರರು ಬರೆದು ವರ್ಣಿಸಿದ ಮಹಾಪುರಾಣ ಕಥೆ ಎಂದಿದ್ದಾನೆ.

*ಅಸದೃಶ ವಾಗ್ವಿಭೂತಿಯುತನಾದಿಕವೀಶ್ವರನಿಂದ್ರಭೂತಿ ವ*
*ರ್ಣ್ಣಿಸಿದ ಮಹಾಪುರಾಣ ಕಥೆಯಂ ಭುವನತ್ರಿತಯ ಪ್ರಸಿದ್ಧಮಂ*
*ಪೊಸಯಿಸಿ ಪೇೞಲೀ ಕೃತಿಯೊಳಾಂಬಗೆದೆಂ ಭರದಿಂದ ಮೀಸಲಾ*
*ಟಿಸುವೆಳವಾೞೆಯಂತಿರೆ ತಿಮಿಂಗಳನೀಸಿದಗಾಧ ವಾರ್ಧ್ಧಿಯಂ|| (1 - 34)*

ಈ ವೀರಚರಿತ ಪುಣ್ಯಾಸ್ರವ - ಪುಣ್ಯಬಂಧ, ದುರಿತಗಳನ್ನು ದೂರಮಾಡುವ, ಧರ್ಮಾರ್ಥಕಾಮಮೋಕ್ಷಗಳನ್ನು ಒದಗಿಸುವ ತವನಿಧಿ, ವರ್ದ್ಧಮಾನ ಹೆಸರಿನ ಜೊತೆಗೆ 'ಮಹಾವೀರ', 'ಸನ್ಮತಿ' ಹಾಗೂ 'ಅಕಳಂಕ' ಎಂಬ ಹೆಸರುಗಳೂ ಪ್ರಚಲಿತವಾಗಿದ್ದವು. ವರ್ದ್ಧಮಾನ ಪುರಾಣಕ್ಕೆ ಮಹಾವೀರಚರಿತ್ರೆ, ಸನ್ಮತಿ ಚರಿತ್ರೆ, ವರ್ದ್ಧಮಾನಚರಿತೆ ಹಾಗೂ 'ಶ್ರೀವೀರ

ಚರಿತೆ' ಎಂಬ ಹೆಸರುಗಳು ಇದ್ದುದು ಬೇರೆ ಬೇರೆ ಆಕರಗಳಿಂದ ತಿಳಿದು ಬಂದಿದೆ.




*ವೀರಸೇನೋ ಮಹಾವೀರೋ ವೀರಸೇನೇಂದ್ರತಾಂಗತಃ*
*ವೀರಸೇನೇಂದ್ರವಂಧ್ಯಾಂಘ್ರಿ ವೀರಸೇನೇನ ಭಾವಿತಃ ||*

*(ಉ.ಪು. ಪರ್ವ - 74 : 3)*

ಭಗವಾನ್ ಮಹಾವೀರರು ಸು. ಕ್ರಿ.ಪೂ. 599ರಲ್ಲಿ ವೈಶಾಲಿ ರಾಜ್ಯದ ಕುಂಡಲಪುರದಲ್ಲಿ ಜನ್ಮವೆತ್ತಿದರು. ಇದು ಈಗಿನ ಬಿಹಾರ ರಾಜ್ಯದ ರಾಜಧಾನಿ ಪಾಟ್ನಾ ನಗರದ ಹತ್ತಿರದಲ್ಲಿದೆ. ತಂದೆ ರಾಜನಾದ ಸಿದ್ಧಾರ್ಥ, ತಾಯಿಯು ತ್ರಿಶಲಾರಾಣಿ. ತಾಯಿ ಗರ್ಭವತಿಯಾದಾಗ ಇವರ ತಂದೆಗೆ ಸಂಪತ್ತು ವಿಶೇಷವಾಗಿ ವರ್ಧಿಸಿತು. ಆದುದರಿಂದ 'ವರ್ಧಮಾನ' ಎಂಬ ಹೆಸರನ್ನು

ಮಗುವಿಗೆ ಇಟ್ಟರು. ಆ ಶಿಶು ಸುಂದರವಾಗಿದ್ದಿತು. ತತ್ಕಾರಣ ಎಲ್ಲರಿಗೂ ಪ್ರೀತಿಯನ್ನುಂಟುಮಾಡಿತು. ಸಿದ್ಧಾರ್ಥ ಹಾಗೂ ತ್ರಿಶಲಾದೇವಿಯರು ಪಾರ್ಶ್ವನಾಥನ ಶ್ರಮಣ ಪರಂಪರೆಯವರಾಗಿದ್ದರು. ವರ್ಧಮಾನನು ಚಿಕ್ಕವನಿದ್ದಾಗ ಒಮ್ಮೆ ಮನೆಯ ಬಳಿ ಮರಕ್ಕೆ ಸುತ್ತಿಕೊಂಡಿದ್ದ ದೊಡ್ಡ ಸರ್ಪವೊಂದನ್ನು ಕೈಯಿಂದ ಎತ್ತಿ ಬಿಸಾಡಿದನು. ಆಗ ಅವನಿಗೆ ಮಹಾವೀರ ಎಂಬ ಉಪಾಧಿ ಬಂದಿತು. ಮಹಾವೀರರ ಚರಿತ್ರೆ ದಿಗಂಬರ ಜೈನ ಪಂಥದಲ್ಲಿ ಒಂದು ಬಗೆಯಿದ್ದರೆ ಶ್ವೇತಾಂಬರರ ಪಂಥದಲ್ಲಿ ಕಿಂಚಿದ ಬೇರೆ ಬಗೆಯದ್ದಾಗಿದೆ. ಅವರ ಪ್ರಕಾರ ಋಷಭದತ್ತ ಹಾಗೂ ದೇವನಂದಿಯರ ಪುತ್ರ ಮಹಾವೀರ. ಇಮ್ಮಡಿ ನಾಗವರ್ಮನು ದಿಗಂಬರ ಪಂಥದ ಕಥೆಯನ್ನು ನಿರೂಪಿಸಿದ್ದಾನೆ. ದಿಗಂಬರರ ಪ್ರಕಾರ ಜನ್ಮಾಭಿಷೇಕ ಕಲ್ಯಾಣ, ನಾಮಕರಣ, ದೀಕ್ಷಾಗ್ರಹಣ, ಕೇವಲಜ್ಞಾನೋದಯ ಹಾಗೂ ಪರಿನಿರ್ವಾಣ ಕಲ್ಯಾಣಗಳು ಬಹಳ ಮಹತ್ವದ್ದಾಗಿವೆ. ಅದಕ್ಕೆ ಸಂಬಂಧಪಟ್ಟ ಚಂದನೆಯ ಕಥೆ, ಖಧಿರ ಸಾಗರನ ಕತೆ ಮುಂತಾಗಿ ಹಲವು ಕಥೆಗಳೂ ಪೂರ್ವಭವಾವಳಿಗಳೂ ನಿರೂಪಣಗೊಂಡಿವೆ. ಜೀವನದಲ್ಲಿ ಅನೇಕ ಕಷ್ಟಕಾರ್ಪಣ್ಯಗಳಿಗೆ ಮಹಾವೀರರು ಈಡಾಗಿದ್ದರು. ಕಠಿಣ ತಪಸ್ಸನ್ನು ಅವರು ಆಚರಿಸಿದರು. ಸನ್ಯಾಸಿ ಜೀವನದಲ್ಲಿ ಅನಾದರದ ನೋವನ್ನೂ ವಿಶೇಷವಾಗಿ ಅನುಭವಿಸಿದರು. ಕೇವಲ ಜ್ಞಾನ ಉಂಟಾದ ಮೇಲೆ ಮಹಾವೀರರು ಸಮವಸರಣದಲ್ಲಿ ವಿರಾಜಮಾನರಾಗಿ ವಿಹಾರ ಮಾಡಿದರು. ನಾಡಿನ ತುಂಬ ತಿರುಗಾಡಿದರು. ಇಂದ್ರಭೂತಿಗಣಧರರು ಅವರ ಪ್ರಿಯಾಗ್ರಶಿಷ್ಯರಾದರು. ಚತುರ್ವಿಧ ಸಂಘವನ್ನು ಸ್ಥಾಪಿಸಿದರು. ಆರ್ಯಿಕೆಯರಿಗೆ ದೀಕ್ಷೆಯನ್ನು ಕೊಟ್ಟರು. ಈ ದೀಕ್ಷಾಗ್ರಹಣ ಕಾರ್ಯವು ಜನತೆಯಲ್ಲಿ ಆಂದೋಲನಕ್ಕೆ ಕಾರಣವಾಯಿತು.

ಆಗಿನ ಕಾಲದಲ್ಲಿ ಅದು ವಿಚಾರಕ್ರಾಂತಿಯನ್ನು ಸೃಷ್ಟಿಸಿತು. ಅಹಿಂಸೆ, ಅನೇಕಾಂತವಾದ, ಅಪರಿಗ್ರಹ, ಅಸ್ನೃತ, ಅಸ್ತೇಯ, ಬ್ರಹ್ಮಚರ್ಯ

ಮುಂತಾಗಿ ಅನೇಕ ವಿಷಯಗಳ ಬಗೆಗೆ ಜನತೆಯಲ್ಲಿ ಪ್ರಚಾರ ಮಾಡಿ ತಮ್ಮ 72ನೇ ವಯಸ್ಸಿನಲ್ಲಿ ಬಿಹಾರದ ಪಾವಾಪುರಿಯಲ್ಲಿ ನಿರ್ವಾಣವನ್ನು ಪಡೆದರು ಮಹಾವೀರರು.

ನಾಗವರ್ಮನ ಕಥಾ ನಿರೂಪಣಶಕ್ತಿ ತುಂಬ ಸರಳವಾಗಿದೆ. ಪಂಪ ರನ್ನರ ಕಾವ್ಯಗಳ ಛಾಯೆ ಅನೇಕ ಕಡೆಯಲ್ಲಿ ಕಾಣಬಹುದಾಗಿದೆ. ಪಂಪನ ಅರಿಕೇಸರಿಯ ರಾಜ್ಯದ ವರ್ಣನೆ - ಕುರುಜಾಂಗಣ ನಾಡಿನ ಸುಂದರ ವಿವರಣೆ - ನಾಗವರ್ಮನಲ್ಲಿಯೂ ಅಲ್ಲಲ್ಲಿ ಬಂದಿದೆ. ಅದೇ ಬಗೆಯ ಛಂದಸ್ಸುಗಳನ್ನು ಕೂಡ ಆತ ಅಲ್ಲಲ್ಲಿ ಪ್ರಯೋಗಿಸಿದ್ದಾನೆ. ಉದಾ :

*ರತಿನಿಕೇತಮೆನಿಸುವೇೞುನೆಲೆಯ ಮಾಡದೊಳ್*
*ಜಿತಾಮರೇಂದ್ರನೀಳದೊಳ್*
*ದೇವದೇವಜನನಿ ಪವಡಿಸಿಪ್ಪ ಸದಭಿರಾಮದೊಳ್*
*ನಿಶಾವಸಾನ ಸಮಯದೊಳ್*

ಇತ್ಯಾದಿ 34 ಪಂಕ್ತಿಗಳಲ್ಲಿ ಇದೆ (ಆ. ೧೧ -೫೮)

## ಪಂಪ : ವಿಕ್ರಮಾರ್ಜುನ ವಿಜಯ

*ಅದಱಿಪೊಱಿವೊಟಿಲವಿಶಾಳ ಕನಕಕೃತಕ ಗಿರಿಗಳಿಂ*
*ಫಳಪ್ರಸೂನತರುಗಳಿಂ*
*ನನೆಯ ಕೊನೆಯ ತಳಿರ ಮುಗುಳವನಲತಾನಿಕುಂಜದಿಂ*
*ಪ್ರಸೂನರಜದ ಪುಂಜದಿಂ*

ಇತ್ಯಾದಿ 26 ಪಂಕ್ತಿಗಳಿವೆ (ಆ. ೧ - ೫೮). ಪಂಪ 'ರಗಳೆ' ಎಂದಿದ್ದಾನೆ, ನಾಗವರ್ಮ ಇದನ್ನು 'ಉತ್ಸಾಹ ಛಂದರಗಳೆ' ಎಂದಿದ್ದಾನೆ. ಇದನ್ನು 'ಲಯಗ್ರಾಹಿ' ಎಂದು ಛಂದೋವಿದರು ಗುರುತಿಸುತ್ತಾರೆ. ಇದು ಅಪರೂಪದ ಛಂದ - ಬಂಧ. ಪಂಪನ 'ಅದಱಿ ಪೊಱಿಪೊಟಿಲು' ನಾಗವರ್ಮನಲ್ಲಿ

'ಅದಱಪೊಱವೊಟಲೊಳಂಗಜ' (ಆ. ೧ - ೫೦) ಮತ್ತು 'ಅದಱಪೊಟಲದೆಲ್ಲಿ ನೋಡೆಯುಂ' (ಆ. ೭ - ೪೭) ಎಂದು ಮುಂತಾಗಿ ಬಂದಿದೆ.

ಮಟ್ಟರಗಳೆ (ಆ. ೧ - ೪೮) ಲಲಿತರಗಳೆ (ಆ. ೧೦ - ೩೪) ಮಂದಾನಿಲಗಳೆ (ಆ. ೧೩ - ೨೧)

*ಆಗಳ್ ಕೋದೆತ್ತಿದ ತೆಱದಿಂದಂ*
*ಬೇಗಂ ನೆರೆದುದು ನಿಶಿಚರ ವೃಂದಂ*
*ಕಹಕಹ ರುತಿಮಿಗೆ ದೆಸೆಯಿಂದುವರಂ*
*ಬಹುಲ ಪುರಸ್ತನವೃತ ಮುಖವಿವರಂ*

ಇತ್ಯಾದಿ 30 ಪಂಕ್ತಿಗಳಲ್ಲಿ ಕಾವ್ಯ ಝುರಿ ಹರಿದಿದೆ. ಜಿನಸೇನಾಚಾರ್ಯ ಹಾಗೂ ಗುಣಭದ್ರಾಚಾರ್ಯರ ಮಹಾಪುರಾಣಕ್ಕೆ ಎಲ್ಲ ಜೈನ ಪುರಾಣಗಳು ಋಣಿ ಆಗಿವೆ. ಅಲ್ಲಿನ ಸಂಗತಿಗಳನ್ನು ಅನುವಾದಿಸಿದ 'ಕನ್ನಡವಕ್ಕಿಗಳು' ಇವು. ಪಂಪನು ತನ್ನನ್ನು 'ಕೊಂಡಕುಂದಾನ್ವಯದ ಶುಕ' ಎಂದೇ ಹೇಳಿಕೊಂಡಿದ್ದಾನೆ. (ಆ. ಪು. ಆ. ೧ - ೧೪). ನಾಗವರ್ಮ ಗೃಹಸ್ಥ, ಅಂತೆಯೇ ಪಂಪನಂತೆ ಹೇಳುವಂತಿಲ್ಲ. ಆದರೆ ಮಹಾಪುರಾಣವನ್ನು ಸಾಕಷ್ಟು ಅನುಕರಿಸಿದ್ದಾನೆ. ಚಂದನಾ ಕಥಾ ಪ್ರಸಂಗದಲ್ಲಿ ಇದನ್ನು ಕಾಣಬಹುದು -

*ಸ್ಥೂಣಾಗಾರಾಭಿಧಾನೇಭೂದ್ಭಾರದ್ವಾಜದ್ವಿಜಸ್ಯಸಃ*
*ತನೂಜಃ ಪುಷ್ಪದತ್ತಾಯಾಂ ಪುಷ್ಪಮಿತ್ರಾಹ್ವಯಃ ಪುನಃ ||*

(ಉ.ಪು. ಪರ್ವ : 74 - 71) ನಾಗವರ್ಮ -

*ಸ್ಥೂಣಾಗಾರಂ ಪುರಮದರೊಳಿಪ್ಪಂ ಭರದ್ವಾಜ ವಿಪ್ರಂ*
*ಗೇಣೀಲೋಳೇಕ್ಷಣೆ ವನಿತೆ ತತ್ಪುಷ್ಪದಂತಾಖ್ಯೆಯಾದಳ್*
*ಕ್ಷೋಣೀಚಕ್ರಪ್ರಥಿತಯಶನಾ ವಿಪ್ರಯುಗ್ಮಕ್ಕೆ ವಿಪ್ರ*
*ಪ್ರಾಣತ್ರಾಣ ಪ್ರವಣ ಚರಣಂ ಪುಟ್ಟಿದಂ ಪುಷ್ಯಮಿತ್ರಂ ||*

(ಆ. ೬ - ೧೪) ಗೇಣೀಲೋಳೇಕ್ಷಣೆ - ಹರಿತಕಟಾಕ್ಷೇಕ್ಷಣೆ - ಎಂಬ

ಕೆಲ ವಿಶೇಷಣ ಬಿಟ್ಟರೆ ಎರಡರಲ್ಲೂ ಒಂದೇ ಹೂರಣ. ಕಿರುಪುಸ್ತಿಕೆ ಬರಹಗಾರನ ಕೈ ಕಟ್ಟುತ್ತದೆ - ತೋಲನ ವಿಮರ್ಶೆಗೆ ಅಸಗನ ಕಾವ್ಯಕ್ಕೆ ಆತ ಹೀಗೆ ಋಣಿ ಆಗಿದ್ದಾನೆ. ಪ್ರಾಕೃತ ಕೃತಿಗಳನ್ನು ತಾನು ನೋಡಿದುದಾಗಿ ತಿಳಿಸಿದ್ದಾನೆ (ಆ. ೧೬ - ೪೯). ಅಡಿಗೆ ಉಂಡು ನೋಡಬೇಕು, ಹೂವನ್ನು ಮೂಸಿ ನೋಡಬೇಕು ಮತ್ತು ಕಾವ್ಯವನ್ನು ಓದಿ ಸವಿಯಬೇಕು.

## ಕಾವ್ಯಾವಲೋಕನಂ

ಇದು ನಿಜವಾಗಿಯೂ ಕಾವ್ಯಾವಲೋಕನಂ. ಕಾವ್ಯಾಸ್ವಾದಕ್ಕೆ ಮತ್ತು ಕಾವ್ಯರಚನೆಗೆ ಬೇಕಾದ ವ್ಯಾಕರಣ ಅಲಂಕಾರ ಹಾಗೂ ಕವಿಸಮಯ ಇವನ್ನು 'ಶಬ್ದಸ್ಮೃತಿ', 'ಕಾವ್ಯಮಲವ್ಯಾವೃತ್ತಿ', 'ಗುಣವಿವೇಕಂ', 'ರೀತಿ ಕ್ರಮ ರಸನಿರೂಪಣಂ', 'ಕವಿ ಸಮಯಂ' ಎಂದು ಐದು ಅಧಿಕರಣಗಳಲ್ಲಿ ಶಾಸ್ತ್ರವನ್ನು ಬೇರೆ ಬೇರೆ ಕಾವ್ಯಗಳಿಂದ ಉದಾಹರಣೆಗಳನ್ನು ಎತ್ತಿಕೊಟ್ಟಿದ್ದಾನೆ. ತನ್ನ ಕಾವ್ಯದಿಂದಲೂ ನಿದರ್ಶನಗಳನ್ನು ಎತ್ತಿಕೊಂಡಿದ್ದಾನೆ. ಜ್ಞಾತ ಕವಿಗಳಾದ ಅಸಗ, ಪಂಪ, ಪೊನ್ನ, ರನ್ನ, ಗುಣವರ್ಮ (ಕಾವ್ಯಸಾರ ಸಂಕಲನ) ಹಂಸರಾಜ, ಗಜಾಂಕುಶ, ಶ್ರೀವಿಜಯ, ವಾಲ್ಮೀಕಿ ರಾಮಾಯಣ, ಕಾಳಿದಾಸ, ಭರ್ತೃಹರಿ, ಭಾರವಿ, ಮಾಘ, ಭಟ್ಟಿ, ಆನಂದವರ್ಧನ, ಶ್ರೀಪಾಲರಾಜ, ಭವಭೂತಿ ಹಾಗೂ ತ್ರಿವಿಕ್ರಮ ಮುಂತಾಗಿ ಅನೇಕರ ಕೃತಿಗಳಿಂದ ಆರಿಸಿ, ಅನುವಾದಿಸಿ ಈ ಶಾಸ್ತ್ರಗ್ರಂಥವನ್ನು ರಚಿಸಿದ್ದಾನೆ. ಶಾಸ್ತ್ರ ಗ್ರಂಥಗಳನ್ನು ಕೂಡ ಹೀಗೆಯೇ ಸಾಕಷ್ಟು ವಿಸ್ತಾರವಾಗಿ ಅಳವಡಿಸಿಕೊಂಡಿದ್ದಾನೆ - ಅನುವಾದಿಸಿಕೊಟ್ಟಿದ್ದಾನೆ. ಭಾಮಹ, ದಂಡಿ, ರುದ್ರಟ, ವಾಮನ, ಉದ್ಭಟ, ಅಮರಚಂದ್ರ, ರಾಜಶೇಖರ ಹಾಗೂ ಶ್ರೀವಿಜಯ (ಕವಿರಾಜ ಮಾರ್ಗ) ಮುಂತಾಗಿ ಅನೇಕರ ಕೃತಿಗಳನ್ನು ಆಲೋಚನೆ ಮಾಡಿ ಗ್ರಂಥ ರಚಿಸಿದ್ದಾನೆ. ಕೆಳಗೆ ಕಾಣಿಸಿದ ಸಂಸ್ಕೃತ ಪ್ರಾಕೃತ ನಿದರ್ಶನಗಳನ್ನು ನೋಡಿ.

ಕಾವ್ಯಾವಲೋಕನದಲ್ಲಿಯ ಸೂತ್ರೋದಾಹರಣೆಗಳಿಗೆ ಮಾತೃಕೆಗಳಾದ ಅಥವಾ ಸಂವಾದಿಗಳಾದ ಭಾಮಹ, ದಂಡಿ, ರುದ್ರಟ, ವಾಮನ ಮೊದಲಾದ ಆಲಂಕಾರಿಕರ ಗ್ರಂಥಗಳಲ್ಲಿಯ ಸೂತ್ರೋದಾಹರಣೆಗಳು. (RN)

ಸೂ = ಸೂತ್ರ ಉ = ಉದಾಹರಣೆ ಕಾ = ಕಾವ್ಯಾವಲೋಕನ

## 1) ಭಾಮಹನ ಕಾವ್ಯಾಲಂಕಾರ

| ಕಾ\|\| ಪದ್ಯಸಂಖ್ಯೆ | | | ಶ್ಲೋಕಸಂಖ್ಯೆ |
|---|---|---|---|
| 426 | | ವಿನಯೇನ ವಿನಾ ಕಾ ಶ್ರೀಃ \| ಕಾ ನಿಶಾ ಶಶಿನಾ ವಿನಾ \|\| | I.4 |
| | | ರಹಿತಾ ಸತ್ಕವಿತ್ವೇನ \| ಕೀದೃಶೀ ವಾಗ್ವಿದಗ್ಧತಾ \|\| | |
| 427 | | ಧರ್ಮಾರ್ಥಕಾಮಮೋಕ್ಷೇಷು \| ವೈಚಕ್ಷಣ್ಯಂ ಕಲಾಸು ಚ \|\| | |
| | | ಪ್ರೀತಿಂ ಕರೋತಿ ಕೀರ್ತಿಂ ಚ \| ಸಾಧುಕಾವ್ಯನಿಬಂಧನಂ \|\| | I.2 |
| 430 | ಸೂ. | ಶಬ್ದಾರ್ಥೌ ಸಹಿತೌ ಕಾವ್ಯಂ \| ..........\|\| | I.16 |
| 453 | ಸೂ. | ಪದಾನಾಮೇವ ಸಂಘಾತಃ \| ಸಾಪೇಕ್ಷಾಣಾಂ ಪರಸ್ಪರಂ \|\| | |
| | | ನಿರಾಕಾಂಕ್ಷಂ ಚ ತದ್ವಾಕ್ಯ \| ಮೇಕವಸ್ತು ನಿಬಂಧನಂ \|\| | IV.4 |
| 455 / 471 | ಸೂ. | ಅಪಾರ್ಥಂ ವ್ಯರ್ಥಮೇಕಾರ್ಥಂ \| ಸಸಂಶಯಮಪಕ್ರಮಂ \|\| | IV. 1 |
| | | ಶಬ್ದಹೀನಂ ಯತಿಭ್ರಷ್ಟಂ \| ಭಿನ್ನವೃತ್ತಂ ವಿಸಂಧಿ ಚ \|\| | |
| | | ದೇಶಕಾಲಕಲಾಲೋಕ \| ನ್ಯಾಯಾಗಮವಿರೋಧಿ ಚ \|\| | IV. 2 |
| 459 | ಸೂ. | ಭಯಶೋಕಾಭ್ಯಸೂಯಾಸು \| ಹರ್ಷವಿಸ್ಮಯಯೋರಪಿ \|\| | IV. 14 |
| | | ಯಥಾಹ ಗಚ್ಛ ಗಚ್ಛೇತಿ \| ಪುನರುಕ್ತಂ ನ ತದ್ವಿದುಃ \|\| | |
| 465 | ಸೂ. | ವಿರುದ್ಧಾರ್ಥಂ ಮತಂ ವ್ಯರ್ಥಂ \| ವಿರುದ್ಧಂ ತೂಪದಿಶ್ಯತೇ \|\| | IV. 9 |
| | | ಪೂರ್ವಾಪರಾರ್ಥವ್ಯಾಘಾತಾ \| ದ್ವಿಪರ್ಯಯಕರಂ ಯಥಾ \|\| | |

432 ಸೂ. ಗುರೋರ್ಲಘೋಶ್ಚ ವರ್ಣಸ್ಯ | ಯೋಸ್ಥಾನೇ ರಚನಾವಿಧಿಃ || IV. 25
ತನ್ನ್ಯೂನಾಧಿಕತಾ ವಾಪಿ | ಭಿನ್ನವೃತ್ತಮಿದಂ ಯಥಾ ||

498 ಸೂ. ಏತದ್ಗ್ರಾಹ್ಯಂ ಸುರಭಿ ಕುಸುಮಂ ಗ್ರಾಮ್ಯಮೇತನ್ನಿಧೇಯಂ |
ಧತ್ತೇ ಶೋಭಾಂ ವಿರಚಿತಮಿದಂ ಸ್ಥಾನಮಸ್ಯೈ ತದಸ್ಯ
ಮಾಲಾಕಾರೋ ರಚಯತಿ ಯಥಾ ಸಾಧು ವಿಜ್ಞಾಯ ಮಾಲಾಂ |
ಯೋಜ್ಯಂ ಕಾವ್ಯೇಷ್ವವಹಿತಧಿಯಾ ತದ್ವದೇವಾಭಿಧಾನಂ || I. 59

522 ಸೂ. ಗೌಡೀಯಮಿದಮೇತತ್ತು | ವೈದರ್ಭಮಿತಿ ಕಿಂ ಪೃಥಕ್ | I. 32
ಗತಾನುಗತಿಕನ್ಯಾಯಾ | ನ್ನಾನಾಖ್ಯೇಯಮಮೇಧಸಾಂ ||

546 ಸೂ. ಸಂದಷ್ಟಕಸಮುದ್ಗಾದೇ | ರತ್ರೈವಾಂತರ್ಗತಿರ್ಮತಾ || II. 10

555 ಸೂ. ಸರೂಪವರ್ಣವಿನ್ಯಾಸ | ಮನುಪ್ರಾಸಂ ಪ್ರಚಕ್ಷತೇ || II. 5

566 ಸೂ. ವಿರುದ್ಧೇನೋಪಮಾನೇನ | ದೇಶಕಾಲಕ್ರಿಯಾದಿಭಿಃ || II. 30
ಉಪಮೇಯಸ್ಯ ಯತ್ಸಾಮ್ಯಂ | ಗುಣಲೇಶೇನ ಸೋಪಮಾ ||

679 ಸೂ. ಹೀನತಾಸಂಭವೋ ಲಿಂಗ | ವಚೋಭೇದೋ ವಿಪರ್ಯಯಃ || II. 93
ಉಪಮಾನಾಧಿಕತ್ವಂ ಚ | ತೇನಾಸದೃಶತಾಪಿ ಚ || II. 40
ತ ಏತ ಉಪಮಾದೋಷಾ | ಸ್ಸಪ್ತ ಮೇಧಾವಿನೋದಿತಾಃ ||

681 ಉ. ಕ್ವಚಿದಗ್ರೇ ಪ್ರಸರತಾ | ಕ್ವಚಿದಾಪತ್ಯನಿಘ್ನ ತಾ || I. 54
ಶುನೇವ ಸಾರಂಗಕುಲಂ | ತ್ವಯಾ ಭಿನ್ನಂ ದ್ವಿಷಾಂ ಬಲಂ ||

683 ಉ. ವನೇಽಥ ತಸ್ಮಿನ್ ವನಿತಾನುಯಾಯಿನಃ | II. 63
ಪ್ರವೃತ್ತದಾನಾರ್ದ್ರಕಟಾ ಮತಂಗಜಾಃ ||
ವಿಚಿತ್ರಬರ್ಹಾಭರಣಾಶ್ಚ ಬರ್ಹಿಣೋ |
ಬಭುರ್ದಿಶೀವಾಮಲವಿಗ್ರಹಾ ಗ್ರಹಾಃ || (ಕಾ.ವಿಕ್ರ. 4.47)

685 ಸೂ. ಸಮಾನವಸ್ತುನ್ಯಾಸೇನ | ಪ್ರತಿವಸ್ತೂಪಮೋಚ್ಯತೇ || II. 34
ಯಥೇವಾನಭಿಧಾನೇಪಿ | ಗುಣಸಾಮ್ಯಪ್ರತೀತಿತಃ ||

679 ಸೂ. ಪ್ರತಿಷೇಧ ಇವೇಷ್ಟಸ್ಯ | ಯೋ ವಿಶೇಷೋಭಿಧಿತ್ಸಯಾ || II. 68
ಆಕ್ಷೇಪ ಇತಿ ತಂ ಸಂತಃ ಶಂಸಂತಿ . . . . ||

708 ಸೂ. ಅಪಹ್ನುತಿರಭೀಷ್ಟಾ ಚ | ಕಿಂಚಿದಂತರ್ಗತೋಪಮಾ ||
ಭೂತಾರ್ಥಾಪಹ್ನವಾದಸ್ಯಾಃ | ಕ್ರಿಯತೇ ಚಾಭಿಧಾ ಯಥಾ || III. 19

712 ಉ. ನೇಯಂ ವಿರೌತಿ ಭೃಂಗಾಳೀ | ಮದೇನ ಮುಖರಾ ಮುಹುಃ ||III. 20
ಅಯಮಾಕೃಷ್ಯಮಾಣಸ್ಯ | ಕಂದರ್ಪಧನುಷೋ ಧ್ವನಿಃ ||

727 ಸೂ. ಅವಿವಕ್ಷಿತಸಾಮಾನ್ಯಾ | ಕಿಂಚಿಚ್ಚೋಪಮಯಾ ಸಹ || II. 91
ಅತದ್ಗುಣಕ್ರಿಯಾಯೋಗಾ | ದುತ್ಪ್ರೇಕ್ಷಾತಿಶಯಾನ್ವಿತಾ ||

736 ಸೂ. ಕ್ರಿಯಾಯಾಃ ಪ್ರತಿಷೇಧೇ ಯಾ | ತತ್ಫಲಸ್ಯ ವಿಭಾವನಾ || II. 77
ಜ್ಞೇಯಾ ವಿಭಾವನೈವಾಸೌ | ಸಮಾಧೌ ಸುಲಭೇ ಸತಿ ||

738 ಉ. ಅಪೀತಮತ್ತಾಶ್ಶಿಖಿನೋ | ದಿಶೋನುತ್ಕಂಠಿತಾಕುಲಾಃ ||
ನೀಪೋಽವಿಲಿಪ್ತಸುರಭಿ | ರಭ್ರಷ್ಟಕಲುಷಂ ಜಲಂ || II. 78

770 ಸೂ. ವರಾ ವಿಭೂಷಾ ಸಂಸೃಷ್ಟಿ | ರ್ಬಹ್ವಲಂಕಾರಯೋಗತಃ || III. 49

771 ಉ. ಗಾಂಭೀರ್ಯಲಾಘವವತೋ | ರ್ಯುವಯೋಃ ಪ್ರಾಜ್ಯ ರತ್ನಯೋಃ
ಸುಖಸೇವ್ಯೋ ಜನಾನಾಂ ತ್ವಂ | ದುಷ್ಟಗ್ರಾಹೋಂಭಸಾಂಪತಿಃ ||
III. 50

772 ಸೂ. ಆಶೀರಪಿಚ ಕೇಷಾಂಚಿದಲಂಕಾರತಯಾ || III. 55

776 ಸೂ. ಭಾವಿಕತ್ವಮಿತಿ ಪ್ರಾಹುಃ | ಪ್ರಬಂಧವಿಷಯಂ ಗುಣಂ || III. 53

777 ಸೂ. ಚಿತ್ರೋದಾತ್ತಾದ್ಭುತಾರ್ಥತ್ವಂ | ಕಥಾಯಾಃ ಸ್ವಭಿನೀತತಾ || III. 54
ಶಬ್ದಾನಾಕುಲತಾ ಚೇತಿ | ತಸ್ಯ ಹೇತುಂ ಪ್ರಚಕ್ಷತೇ ||

## (2) ದಂಡಿಯ ಕಾವ್ಯಾದರ್ಶ

424 ನೈಸರ್ಗಿಕೀ ಚ ಪ್ರತಿಭಾ | ಶ್ರುತಂ ಚ ಬಹು ನಿರ್ಮಲಂ || I. 103
ಅಮಂದಶ್ಚಾಭಿಯೋಗೋಸ್ಯಾಃ | ಕಾರಣಂ ಕಾವ್ಯಸಂಪದಃ ||

455 ಸೂ. ಅಪಾರ್ಥಂ ವ್ಯರ್ಥಮೇಕಾರ್ಥಂ | ಸಸಂಶಯಮಪಕ್ರಮಂ || III. 125
ಶಬ್ದಹೀನಂ ಯತಿಭ್ರಷ್ಟಂ | ಭಿನ್ನವೃತ್ತಂ ವಿಸಂಧಿಕಂ ||

471 } ಸೂ. ದೇಶಕಾಲ ಕಲಾಲೋಕ | ನ್ಯಾಯಾಗಮವಿರೋಧಿ ಚ || III. 126
476 ಇತಿ ದೋಷಾ ದಶೈವೈತೇ | ವರ್ಜ್ಯಾಃ ಕಾವ್ಯೇಷು ಸೂರಿಭಿಃ ||

ವಿರೋಧಸ್ಸಕಲೋಪ್ಯೇಷ | ಕದಾಚಿತ್ಕವಿಕೌಶಲಾತ್ || III. 179
ಉತ್ಕ್ರಮ್ಯ ದೋಷಗಣನಾಂ | ಗುಣವೀಧೀಂ ವಿಗಾಹತೇ ||

459 ಸೂ. ಅವಿಶೇಷೇಣ ಪೂರ್ವೋಕ್ತಂ | ಯದಿ ಭೂಯೋ ಹಿ ಕೀರ್ತ್ಯತೇ || III. 135
ಅರ್ಥತಃ ಶಬ್ದತೋ ವಾಪಿ | ತದೇಕಾರ್ಥಂ ಮತಂ ಯಥಾ ||

ಅನುಕಂಪಾದ್ಯತಿಶಯೋ | ಯದಿ ಕಶ್ಚಿದ್ವಿವಕ್ಷ್ಯತೇ || III. 137
ನ ದೋಷಃ ಪುನರುಕ್ತೋಪಿ | ಪ್ರತ್ಯುತೇಯಮಲಂಕ್ರಿಯಾ ||

460 ಉ. ಉತ್ಕಾಮುನ್ಮನಯಂತ್ಯೇತೇ | ಬಾಲಾಂ ತದಲಕತ್ವಿಷಃ || III. 136
ಅಂಭೋಧರಾಸ್ತಟಿತ್ವಂತೋ | ಗಂಭೀರಾಃ ಸ್ತನಯಿತ್ನವಃ ||

465 ಸೂ. ಏಕವಾಕ್ಯೇ ಪ್ರಬಂಧೇ ವಾ | ಪೂರ್ವಾಪರಪರಾಹತಂ || III. 131
ವಿರುದ್ಧಾರ್ಥತಯಾ ವ್ಯರ್ಥ | ಮಿತಿ ದೋಷೇಷು ಪಠ್ಯತೇ ||

ಅಸ್ತಿ ಕಾಚಿದವಸ್ಥಾ ಸಾ | ಸಾಭಿಷಂಗಸ್ಯ ಚೇತಸಃ || III. 133
ಯಸ್ಯಾಂ ಭವೇದಭಿಮತಾ | ವಿರುದ್ಧಾರ್ಥಾಪಿ ಭಾರತೀ ||

466 ಉ. ಜಹಿ ಶತ್ರು ಬಲಂ ಕೃತ್ಸ್ನಂ | ಜಯ ವಿಶ್ವಂಭರಾಮಿಮಾಂ | III. 132
ತವ ನೈಕೋsಪಿ ವಿದ್ವೇಷ್ಟಾ | ಸರ್ವಭೂತಾನುಕಂಪಿನಃ ||

